ಡಾ. ಎಂ. ಚಂದ್ರ ಪೂಜಾರಿ

# ಪರಿಸರ ಮತ್ತು ಅಭಿವೃದ್ಧಿ



# ಪರಿಸರ ಮತ್ತು ಅಭಿವೃದ್ಧಿ

ಡಾ. ಎಂ. ಚಂದ್ರ ಪೂಜಾರಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**PARISARA MATTU ABHIVRUDDI-** By Dr. M. Chandra Poojary, Published by The Director, Prasaranga, Kannada University, Hampi, Vidyaranya, Kamalapura - 583 221.
First Impression: 1998 Pp: ii + 30 , Rs. 3-00

ಮಂಟಪ ಮಾಲೆ ೩೫



ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ ರೂ. ೩.೦೦

ಮುದ್ರಕರು
**ಲಕ್ಷ್ಮಿ ಮುದ್ರಣಾಲಯ**
ಬೆಂಗಳೂರು - ೧೮

# ಪರಿಸರ ಮತ್ತು ಅಭಿವೃದ್ಧಿ

## ಪ್ರಸ್ತಾವ

ಪರಿಸರ ಸಮಸ್ಯೆ ಮತ್ತು ಚಳವಳಿಗಳು, ಹದಿನೆಂಟನೆಯ ಶತಮಾನದ ಆರಂಭದ ದಶಕಗಳಲ್ಲಿ ಬ್ರಿಟನಿನ್ನಲ್ಲಿ, ನಂತರದ ದಿನಗಳಲ್ಲಿ ಆಮೇರಿಕ ಮತ್ತು ಇತರ ಪಶ್ಚಿಮದ ದೇಶಗಳಲ್ಲಿ ಬಹಳ ತೀವ್ರಗತಿಯಲ್ಲಿದ್ದುವು. ಅದೇ ಸಂದರ್ಭದಲ್ಲಿ ಆ ದೇಶಗಳು ತೀವ್ರಗತಿಯ ಉದ್ಯಮೀಕರಣದತ್ತ ದಾಪುಗಾಲು ಹಾಕುತ್ತಿದ್ದುವು. ಇತ್ತೀಚಿನ ದಿನಗಳಲ್ಲಿ ಭಾರತದಂಥ ಅಭಿವೃದ್ಧಿಶೀಲ ದೇಶಗಳಲ್ಲಿ ಕೂಡ ಪರಿಸರ ಸಮಸ್ಯೆ ಮತ್ತು ಸಂಬಂಧಿತ ಚಳವಳಿಗಳು ಸಾಮಾಜಿಕ ಚಳವಳಿಗಳ ರೂಪ ಪಡೆಯುತ್ತಿವೆ. ಅಂದರೆ: ಸ್ವಾತಂತ್ರ್ಯ ನಂತರ ಅಭಿವೃದ್ಧಿಗಾಗಿ ನಾವು ರೂಪಿಸಿಕೊಂಡ ಕಾರ್ಯಕ್ರಮಗಳು ಮತ್ತು ಪ್ರಸಕ್ತದಲ್ಲಿನ ಪರಿಸರ ಸಮಸ್ಯೆಗಳು ಪರಸ್ಪರ ಪೂರಕವೇ ಎನ್ನುವ ಪ್ರಶ್ನೆ ಸಹಜವಾಗುತ್ತದೆ. ಅಭಿವೃದ್ಧಿಯು ಒಂದು ನಿರ್ದಿಷ್ಟ ಪರಿಸರದಲ್ಲಿ ಮೂರ್ತಗೊಳ್ಳುವ ಪ್ರಕ್ರಿಯೆ. ಪಶ್ಚಿಮದ ಅಭಿವೃದ್ಧಿ ಮಾದರಿಯನ್ನು ಅನುಸರಿಸುವುದರಿಂದ ಅದೇ ರೀತೀಯ ಮತ್ತು ಅದೇ ಪ್ರಮಾಣದ ಪರಿಸರ ಸಮಸ್ಯೆಯನ್ನು ನಾವು ಅನುಭವಿಸಬೇಕೇ? ಪರಿಸರ ನಾಶ ಮತ್ತು ಅಭಿವೃದ್ಧಿಗಳ ನಡುವೆ ನೇರ ಸಂಬಂಧ ಇದೆಯೇ? ಇವೇ ಮುಂತಾದ ಪ್ರಶ್ನೆಗಳು ಇಲ್ಲಿ ಸಹಜವಾಗುತ್ತವೆ. ಆದರೆ, ಈ ಪ್ರಶ್ನೆಗಳು ಅಭಿವೃದ್ಧಿಯ ನಕಾರಾತ್ಮಕ ಚಿತ್ರಣ ಕೊಡುವುದಕ್ಕೆ ಹೆಚ್ಚು ಒತ್ತು ಕೊಡುವುದನ್ನು ಬಿಟ್ಟರೆ; ಪ್ರಸಕ್ತದಲ್ಲಿ ನಡೆಯುತ್ತಿರುವ ಪರಿಸರ ಚಳವಳಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಾಕಾಗುವುದಿಲ್ಲ. ನಾವು ಅನುಸರಿಸುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳ ತಾತ್ವಿಕ ಹಿನ್ನೆಲೆಯೇನು? ಯಾವ ಉದ್ದೇಶಗಳನ್ನು ಇಟ್ಟುಕೊಂಡು ಈ ಕ್ರಮದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ? ನಾವು ಅಂತರ್ಗತಗೊಳಿಸಲು ಪ್ರಯತ್ನಿಸುವ ಅಭಿವೃದ್ಧಿಯ ಪರಿಕಲ್ಪನೆ ನಮ್ಮದೇ ಪರಿಸರದ ಚಾರಿತ್ರಿಕ ಬೆಳವಣಿಗೆಯೇ? ಅಲ್ಲದಿದ್ದ ಪಕ್ಷದಲ್ಲಿ ಬೇರೆ ಪರಿಸರದಲ್ಲಿ ರೂಪುಗೊಂಡ ಅಭಿವೃದ್ಧಿಯ ಪರಿಕಲ್ಪನೆಯನ್ನು ಅಳವಡಿಸಿಕೊಳ್ಳುವ ಅನಿವಾರ್ಯತೆ ಏನು? ನಮಗೆ ಬೇಕಾದ ರೀತಿಯಲ್ಲಿ ಅಭಿವೃದ್ಧಿಯನ್ನು ವ್ಯಾಖ್ಯಾನಿಸಿಕೊಳ್ಳಬಹುದೇ? ಇವೇ ಮೊದಲಾದ ಪ್ರಶ್ನೆಗಳು ಕೂಡ ಇಲ್ಲಿ ಅನಿವಾರ್ಯವಾಗುತ್ತವೆ. ಈ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಅಭಿವೃದ್ಧಿ ಮತ್ತು ಪರಿಸರ ಸಂಬಂಧವನ್ನು ವಿಶ್ಲೇಷಿಸುವ ಒಂದು ಕಿರು ಪ್ರಯತ್ನವನ್ನು ಈ ಬರೆಹದಲ್ಲಿ ಮಾಡಲಾಗಿದೆ.

ಈ ಬರೆಹದ ಮುಖ್ಯ ಉದ್ದೇಶ, ಪರಿಸರ ಮತ್ತು ಅಭಿವೃದ್ಧಿ ಪರಿಕಲ್ಪನೆಯ ಸಂಬಂಧವನ್ನು ವಿಶ್ಲೇಷಿಸುವುದಾದರೂ ಇಲ್ಲಿ ಇತರ ಹಲವಾರು ವಿಚಾರಗಳು, ಮುಖ್ಯವಾಗಿ ಪರಿಸರ ಸಂಬಂಧಿತ ಚಳುವಳಿಗಳ ಸಂದರ್ಭದಲ್ಲಿ ರೂಪುಗೊಂಡ ವಿಚಾರಗಳು, ಕೂಡ ಬರೆಹದ

ಭಾಗವಾಗಿವೆ. ಪ್ರಸ್ತುತ ಬರೆಹದಲ್ಲಿ `ಪರಿಸರ' ಪದವನ್ನು ಅದರ ಬಹು ಪ್ರಚಲಿತ ಅರ್ಥದಲ್ಲಿ ಅಂದರೆ ಸಮಸ್ತ ಪ್ರಾಣಿವರ್ಗ, ಸಸ್ಯವರ್ಗ, ಮತ್ತು ಅದು ಜೀವಿಸುವ ಒಟ್ಟು ವಾತಾವರಣವನ್ನು ಪರಿಸರ ಒಳಗೊಂಡಿದೆ ಎಂಬ ಅರ್ಥದಲ್ಲಿ ಬಳಸಲಾಗಿದೆ. ಅದೇ ರೀತಿ `ಅಭಿವೃದ್ಧಿ'ಯನ್ನು ತಾಂತ್ರಿಕ ಅಭಿವೃದ್ಧಿಯೆಂದು ವ್ಯಾಖ್ಯಾನಿಸಲಾಗಿದೆ. ಇದರ ಅರ್ಥ: `ಅಭಿವೃದ್ಧಿ' ಎಂದರೆ ತಾಂತ್ರಿಕ ಅಭಿವೃದ್ಧಿ ಮಾತ್ರ ಎಂದು ಅರ್ಥವಲ್ಲ. `ಅಭಿವೃದ್ಧಿ' ಎನ್ನುವ ಪದ ವಿಶಾಲವಾದುದು ಮತ್ತು ಇದು ತಾಂತ್ರಿಕ ಅಭಿವೃದ್ಧಿಯೊಂದಿಗೆ ಲಿಬರಲ್ ಮಾಡರ್ನಿಟಿಯನ್ನೂ ಒಳಗೊಂಡಿದೆ ಎಂಬುದರಲ್ಲಿ ಸಂಶಯವಿಲ್ಲ. ಆದಾಗ್ಯೂ ಇಂದಿನ ಪರಿಸರ ಸಮಸ್ಯೆಯಲ್ಲಿ ತಾಂತ್ರಿಕ ಅಭಿವೃದ್ಧಿಯ ಪಾತ್ರ ಮಹತ್ತರವಾಗಿದೆ ಎನ್ನುವುದನ್ನು ಗಮನದಲ್ಲಿಟ್ಟುಕೊಂಡು `ಅಭಿವೃದ್ಧಿ' ಪದವನ್ನು ತಾಂತ್ರಿಕ ಅಭಿವೃದ್ಧಿ ಎನ್ನುವ ಅರ್ಥದಲ್ಲಿ ಇಲ್ಲಿ ಬಳಸಲಾಗಿದೆ.

ಪ್ರಸ್ತುತ ಬರೆಹವನ್ನು ಮೂರೂ ಭಾಗಗಳಲ್ಲಿ ವಿವರಿಸಲಾಗಿದೆ. ಭಾಗ ಒಂದು ಪೀಠಿಕೆಯ ರೂಪದಲ್ಲಿದೆ. ಪರಿಸರ ಸಂಬಂಧಿತ ಚರ್ಚೆಗಳು ಯಾವ ವಿಚಾರಗಳ ಸುತ್ತ ಹೆಣೆಯಲ್ಪಟ್ಟಿವೆ ಮತ್ತು ಯಾವೆಲ್ಲಾ ವಿಚಾರಗಳು ಚರ್ಚೆಯ ಭಾಗವಾಗಬೇಕಿತ್ತು; ಆದರೆ ಆಗಿಲ್ಲ ಎನ್ನುವ ವಿವರಣೆಯನ್ನು ಅದು ಒಳಗೊಂಡಿದೆ. ಎರಡನೆಯ ಭಾಗದಲ್ಲಿ ಅಭಿವೃದ್ಧಿಯ ಪರಿಕಲ್ಪನೆ ರೂಪುಗೊಂಡ ಬಗೆ ಮತ್ತು ಯಾವ ಕಾರಣಕ್ಕಾಗಿ ಈ ನಿರ್ದಿಷ್ಟ ಪರಿಕಲ್ಪನೆ ನಮ್ಮ ಆಧುನೀಕರಣ ಪ್ರಕ್ರಿಯೆಯ ಮುಖ್ಯ ಅಂಶವಾಗಬೇಕಾಯಿತು ಎನ್ನುವುದರತ್ತ ಗಮನ ಹರಿಸಿದ್ದೇನೆ. ಇಲ್ಲಿ ಅಭಿವೃದ್ಧಿ ಪರಿಕಲ್ಪನೆಯ ಹುಟ್ಟು ಮತ್ತು ಅದು ಅಂತಾರಾಷ್ಟ್ರೀಯಗೊಂಡ ವಿವರಣೆಯನ್ನು ವಿಸ್ತಾರವಾಗಿ ಮಾಡಲಾಗಿದೆ. ಪಶ್ಚಿಮದ ಮಾದರಿಯ ಪರಿಕಲ್ಪನೆಯಲ್ಲಿ ಪರಿಸರನಾಶ ಒಳಗೊಂಡಿದೆ. ಆದುದರಿಂದ ಅದನ್ನು ಬಿಟ್ಟು ಪರಿಸರ ನಾಶವಿಲ್ಲದ ಅಭಿವೃದ್ಧಿ ಕಾರ್ಯ ಕ್ರಮಗಳಿಗೆ ಯಾಕೆ ಒತ್ತು ಕೊಡಬಾರದೆಂಬ ವಾದ ಕೂಡ ಇದೆ. ಆದರೆ, ಇಂತಹ ವಾದಗಳು ಪ್ರಸ್ತಕದಲ್ಲಿರುವ ಶ್ರೀಮಂತ ಮತ್ತು ಬಡರಾಷ್ಟ್ರಗಳ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯನ್ನು ಗಮನದಲ್ಲಿಟ್ಟುಕೊಂಡು ಮಾಡಿದ ವಾದಗಳಲ್ಲ. ಬದಲಾಗಿ, ಇಂದು ಪ್ರಪಂಚದ ಯಾವುದೇ ದೇಶ ತನ್ನದೆ ಆದ ಅಂದರೆ ಬಂಡವಾಳಶಾಹಿಯ ಜಾಗತಿಕ ವ್ಯವಸ್ಥೆಗೆ ಪೂರಕವಲ್ಲದ ಉತ್ಪಾದನಾ ತಂತ್ರ ಅಥವಾ ಆರ್ಥಿಕ ನೀತಿಯನ್ನು ಅಧಿಕೃತವಾಗಿ ತನ್ನದಾಗಿಸಿಕೊಂಡಿಲ್ಲ. ಆದಾಗ್ಯೂ ಈ ಶತಮಾನದ ಆರಂಭದಲ್ಲಿ ಎಡಪಂಥೀಯ ದೇಶಗಳಲ್ಲಿ ಈ ಬಗೆಯ ಸ್ವಲ್ಪ ಮಟ್ಟಿನ ಪ್ರಯತ್ನಗಳು ನಡೆದಿದ್ದವು. ಆದರೆ, ಅಲ್ಲಿ ಕೂಡ ಉತ್ಪಾದನಾ ತಂತ್ರದ ವಿಚಾರದಲ್ಲಿ ಮಹತ್ವದ ಬದಲಾವಣೆಗಳು ಇರಲಿಲ್ಲ. ವಿವಿಧತೆಯಿದ್ದರೆ ಅದು ವಿತರಣೆಗೆ ಸಂಬಂಧಿಸಿದಂತೆ ಮಾತ್ರ ಇತ್ತು. ಆದರೆ ಈಗ ಈ ಅಲ್ಪ ಪ್ರಮಾಣದ ಪ್ರಯತ್ನ ಕೂಡ ದುಃಸಾಧ್ಯ ಎಂಬುದು ಹಲವಾರು ಎಡಪಂಥೀಯ ದೇಶಗಳಲ್ಲಿನ ಪ್ರಸಕ್ತ ಬದಲಾವಣೆಗಳಿಂದ ತಿಳಿದು ಬರುತ್ತದೆ. ನಮ್ಮಲ್ಲಂತೂ ಆರಂಭದಿಂದಲೇ ಸಮಾಜವಾದಿ ಸಮಾಜನಿರ್ಮಾಣದ ಹೆಸರಿನಲ್ಲಿ ಅತಿ ಹೆಚ್ಚಿನ ಉತ್ಪಾದನೆಗೆ ಮಹತ್ವ ಕೊಡುವ ಅಭಿವೃದ್ಧಿಯ ಪರಿಕಲ್ಪನೆಯೇ ಜಾರಿಯಲ್ಲಿತ್ತು. ಐದು ದಶಕಗಳ ಈ ಕ್ರಮದ ಅಭಿವೃದ್ಧಿಯ ಅನುಭವದೊಂದಿಗೆ ಈಗ ನಾವು ಸ್ವಯಂ ತಂತ್ರವಾದೀ ನೀತಿಗಳತ್ತ ಗಮನ ಹರಿಸಿದ್ದೇವೆ. ಈ ಬದಲಾವಣೆಗೆ ಕಾರಣ ನಮ್ಮ ಆರ್ಥಿಕ

ಚಟುವಟಿಕೆಗಳಿಂದ ಗಣನೀಯವಾದ ಪರಿಸರ ನಾಶವಾಗಿದೆ ಎಂದಲ್ಲ; ಬದಲಿಗೆ ಸರಕಾರದ ನೇತೃತ್ವದಲ್ಲಿ ನಡೆಯುತ್ತಿದ್ದ ಔದ್ಯಮೀಕರಣ ತೀವ್ರಗತಿಯಲ್ಲಿ ನಡೆಯಲಿಲ್ಲ ಎಂಬುದು, ಆದುದರಿಂದ ಖಾಸಗೀ ಉದ್ಯಮತ್ವಕ್ಕೆ ಹೆಚ್ಚಿನ ಮಹತ್ವ ಕೊಡಬೇಕೆಂಬ ದೃಷ್ಟಿಯಿಂದಾಗಿದೆ. ಈ ಬದಲಾವಣೆ ಕೂಡ ನಮ್ಮದೇ ಸ್ವಂತ ಅನುಭವ ಅಥವಾ ಅಗತ್ಯಗಳಿಗೆ ಅನುಗುಣವಾಗಿ ನಡೆದಿಲ್ಲ. ಬದಲಾಗಿ ಜಾಗತಿಕ ಬಂಡವಾಳಶಾಹಿ ಅರ್ಥ ವ್ಯವಸ್ಥೆಯ ಅಂಗ ಸಂಸ್ಥೆಗಳಾದ ಐ.ಎಂ.ಎಫ್. ವಿಶ್ವಬ್ಯಾಂಕು ಮುಂತಾದವುಗಳ ಒತ್ತಡದಿಂದ ನಡೆಯುತ್ತಿದೆ. ಈ ವಿವರಣೆಗಳೊಂದಿಗೆ ಆಂತರಿಕ ನಿರ್ಧಾರಗಳು ಹೇಗೆ ಅಂತಾರಾಷ್ಟ್ರೀಯ ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗತಿಗಳಿಂದ ಪ್ರಭಾವಕ್ಕೆ ಒಳಗಾಗುತ್ತವೆ ಎಂಬ ವಿಚಾರಕ್ಕೆ ಒತ್ತು ಕೊಡಲಾಗಿದೆ. ಇದೇ ಭಾಗದಲ್ಲಿ ಅಭಿವೃದ್ಧಿ ಪರಿಕಲ್ಪನೆಯ ಅವಿಭಾಜ್ಯ ಅಂಗವಾಗಿರುವ ಪರಿಸರ ನಾಶದ ವಿಚಾರಗಳನ್ನು ಕೂಡಾ ಚರ್ಚಿಸಲಾಗಿದೆ. ಬರೆಹದ ಕೊನೆಯ ಭಾಗದಲ್ಲಿ ಪರಿಸರ ಸಂಬಂಧಿತ ಚಳವಳಿಗಳ ಸಂದರ್ಭದಲ್ಲಿ ರೂಪುಗೊಂಡ ಪ್ರಮುಖ ವಿಚಾರಗಳನ್ನು ವಿಶ್ಲೇಷಿಸಿದ್ದೇನೆ. ಮುಖ್ಯವಾಗಿ ಅನುಭೋಗ ಶೈಲಿಯಲ್ಲಿ ಮೂಲಭೂತ ಪರಿವರ್ತನೆಯಿಲ್ಲದೇ ಮೂರ್ತಗೊಳ್ಳುವ ಪರಿಸರ ಸಂರಕ್ಷಣೆ, ವರ್ಗ ಭೇದವಿಲ್ಲದೆ ಅನ್ವಯವಾಗುವ ಪರಿಸರವಾದ, ಕೈಗಾರಿಕೀರಣಕ್ಕೆ ಸೀಮಿತಗೊಳ್ಳುವ ಪರಿಸರನಾಶ, ಪರಿಸರವಾದದ ಅಲೆಯನ್ನು ಏರಿಬರಲು ಪ್ರಯತ್ನಿಸುವ `ಸಂಸ್ಕೃತಿ'ಯ ಕಲ್ಪನೆ ಇವೇ ಮುಂತಾದವುಗಳನ್ನು ಚರ್ಚಿಸಿದ್ದೇನೆ.

## ತೊಡಕಿನ ಮೂಲ ಎಲ್ಲಿ?

ಪರಿಸರ ಮತ್ತು ಅದರ ರಕ್ಷಣೆ ಕುರಿತಂತೆ ಇಂದು ನಮ್ಮಲ್ಲಿ ವಿಭಿನ್ನ ದೃಷ್ಟಿಕೋನಗಳಿವೆ. ವಿವಿಧ ಜಾತಿ, ಮತ, ಭಾಷೆ, ಸಂಸ್ಕೃತಿ ಮತ್ತು ಭೌಗೋಳಿಕ ಲಕ್ಷಣಗಳುಳ್ಳ ಭಾರತದಲ್ಲಿ ಇದು ಸಹಜ ಕೂಡ. ಪರಿಸರ ಸಂಬಂಧಿತ ಚರ್ಚೆಯಲ್ಲಿ ನಮ್ಮ ವಿವಿಧತೆಯ ಪಾತ್ರ ಮತ್ತು ಅದು ಅಭಿವ್ಯಕ್ತಗೊಂಡ ಬಗೆಗಿನ ವಿವರಣೆ ಅಗತ್ಯ. ಈ ವಿಚಾರಗಳ ಹಿನ್ನೆಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಬಲಗೊಳುತ್ತಿರುವ ಪರಿಸರ ಸಂಬಂಧಿತ ಚಳವಳಿಗಳ ಸಂದರ್ಭದಲ್ಲಿ ರೂಪುಗೊಂಡ ಕೆಲವೊಂದು ವಿಚಾರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು:

೧. ಭಾರತದ ಇಂದಿನ ಸಂದರ್ಭದಲ್ಲಿ ಆಧುನಿಕತೆ ಕೆಲವೊಂದು ವಿಕೃತ ರೂಪಗಳಲ್ಲಿ ಪ್ರಕಟಗೊಳ್ಳುವುದನ್ನು ಬಿಟ್ಟರೆ ಆಧುನಿಕ ಸಮಾಜದ ಅಗತ್ಯಗಳಾದ ನಾಗರಿಕ ಸಮಿತಿಗಳಾಗಲಿ, ಪ್ರಜಾತಂತ್ರವಾಗಲಿ, ಅಧಿಕಾರಶಾಹಿಯಾಗಲಿ ಪರಿಪೂರ್ಣವಾಗಿ ಎಲ್ಲಾ ಸ್ತರಗಳಲ್ಲಿ ಇನ್ನೂ ಕೂಡ ಸರಿಯಾಗಿ ಬೇರೂರಿಲ್ಲ. ಪರಿಣಾಮವಾಗಿ ಖಾಸಗೀ ಅಥವಾ ಸಾರ್ವಜನಿಕ ಬಂಡವಾಳವು ಪರಿಸರ ಸಂಬಂಧಿತ ನಿಯಮಗಳನ್ನು ಗಾಳಿಗೆ ತೂರಿ ಉದ್ಯಮಗಳನ್ನು ಸ್ಥಾಪಿಸುತ್ತಿರುವುದು ಸರ್ವೇ ಸಾಮಾನ್ಯವಾಗಿದೆ. ಈ ಹಿನ್ನೆಲೆಯಲ್ಲಿ ಅಧಿಕಾರಶಾಹಿಯನ್ನು ಪರಿಸರ ಸಂಬಂಧಿತ ನಿಯಮಗಳನ್ನು ಜಾರಿಗೆ ತರುವಂತೆ ಮತ್ತು ಉದ್ಯಮಗಳು ಅದನ್ನು

ಚಾಚು ತಪ್ಪದೆ ಅನುಸರಿಸುವಂತೆ ಒತ್ತಡ ಹೇರುವಲ್ಲಿ ಪರಿಸರ ಚಳವಳಿಯ ಪಾತ್ರವಿದೆ ಎನ್ನುವ ಪರಿಸರವಾದ.

೨. ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ ಸಮುದಾಯದ ಸಂಪನ್ಮೂಲಗಳ ಬಳಕೆ ಕುರಿತಂತೆ ಎರಡು ಪ್ರಮುಖ ಪ್ರಶ್ನೆಗಳು ಈಗ ಕೇಳಿ ಬರುತ್ತಿವೆ:

ಅ. ಸಂಪನ್ಮೂಲಗಳನ್ನು ಬಳಸುವಾಗ ಅದು ಸಮುದಾಯದ ಬಹುತೇಕ ಜನರ ಹಿತಾಸಕ್ತಿಯಿಂದ ಇರಬೇಕು, ಹಾಗಿದ್ದರೆ ಮಾತ್ರ ಸರಕಾರಕ್ಕೆ ಅದನ್ನು ಬಳಸುವ ಏಕಸ್ವಾಮ್ಯ ಹಕ್ಕು ಇರುತ್ತದೆ. ಸರಕಾರವನ್ನು ಇಲ್ಲಿ ಸಮಾಜದ ಎಲ್ಲಾ ವರ್ಗಗಳ ಹಿತಾಸಕ್ತಿಯನ್ನು ಕಾಪಾಡುವ ಒಂದು ಸಂಸ್ಥೆಯೆಂದು ತಿಳಿದು, ಅದರ ನೇತೃತ್ವದಲ್ಲಿ ನಡೆಯುತ್ತಿರುವ ಉದ್ಯಮೀಕರಣ ಮತ್ತು ಅದಕ್ಕಾಗಿ ಬಳಸಿದ ಸಂಪನ್ಮೂಲಗಳಿಂದ ಎಲ್ಲರ ಹಿತ ಸಾಧನೆಯಾಗುತ್ತಿಲ್ಲ ಎನ್ನುವ ಹಿನ್ನೆಲೆಯಲ್ಲಿ ಸರಕಾರದ ಏಕ ಸ್ವಾಮ್ಯತೆಯನ್ನು ಪ್ರಶ್ನಿಸುವ ಪರಿಸರ ವಾದ.

ಆ. ಇದೇ ವಿಚಾರವನ್ನು ಮುಂದುವರಿಸಿ, ಸಂಪನ್ಮೂಲಗಳ ಬಳಕೆಯನ್ನು ಕೇವಲ ಇಂದಿನ ಜನಾಂಗದ ಹಿತದ ದೃಷ್ಟಿಯಿಂದ ಮಾತ್ರವಲ್ಲ, ಭವಿಷ್ಯದ ಜನಾಂಗದ ಹಿತದ ದೃಷ್ಟಿಯಿಂದ ಕೂಡ ಇರಬೇಕು ಎನ್ನುವ ವಾದ.

೩. ಸಂಸ್ಕೃತಿವಾದಿಗಳ ವ್ಯಾಖ್ಯಾನದೊಳಗೆ ಪರಿಸರ ಸಮಸ್ಯೆಯನ್ನು ನೋಡಲು ಪ್ರಯತ್ನಿಸುವ ಪರಿಸರವಾದವೂ ಒಂದುಂಟು. ಈ ಬಗೆಯ ಪರಿಸರವಾದವು ಮುಂದಿಡುವ ಮುಖ್ಯ ವಿಚಾರಗಳೆಂದರೆ:

ಅ. ಪಶ್ಚಿಮದ ಅನುಭೋಗ ಸಂಸ್ಕೃತಿ ನಮ್ಮ `ಅಂತರ್ ಶುದ್ಧಿ' ಮತ್ತು `ಬೌದ್ಧಿಕ' ವಿಚಾರಗಳಿಗೆ ಒತ್ತು ಕೊಡುವ ಸಂಸ್ಕೃತಿಯನ್ನು ನಾಶ ಮಾಡುತ್ತಿದೆ;

ಆ. ದಿಕ್ಕು ದಿಶೆಯಿಲ್ಲದ ಅಧುನೀಕರಣ ನಮ್ಮ ಸಾವಯವ ಸಮಾಜದ ಸ್ಥಿರತೆಯನ್ನು ಮತ್ತು ಸುಖವನ್ನು ಇಲ್ಲದಾಗಿಸಿದೆ; ಮತ್ತು

ಇ. ಪಶ್ಚಿಮದ ಅಭಿವೃದ್ಧಿಯ ಪರಿಕಲ್ಪನೆಯ ಹಿಂದೆ ಇರುವ `ಪರಿಸರವನ್ನು ಮಣಿಸುವುದು', `ಪರಿಸರದ ಮೇಲೆ ಪ್ರಭುತ್ವ' ಮುಂತಾದ ತಾತ್ವಿಕ ಹಿನ್ನೆಲೆಗಳು ನಮ್ಮ `ಪರಿಸರದ ಜೊತೆಗಿನ ಸಹಬಾಳ್ವೆ,' `ಪರಿಸರವನ್ನು ಪ್ರೀತಿಸುವ' ತತ್ತ್ವಗಳಿಗೆ ವಿರುದ್ಧವಾಗಿವೆ.

ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆಗಾಗಿ ಸ್ವಾತಂತ್ರ್ಯಾನಂತರ ನಾವು ಪಶ್ಚಿಮದ ಮಾದರಿಯ ಅಭಿವೃದ್ಧಿಯ ಪರಿಕಲ್ಪನೆಯನ್ನು ನಮ್ಮ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದೇವೆ. ಆದರೆ, ಐದು ದಶಕಗಳ ಅಭಿವೃದ್ಧಿಯ ಹೆಸರಿನಲ್ಲಿ ಆದ ಸಾಧನೆಗಳು ನಮ್ಮ ನಿರೀಕ್ಷೆಗೆ ಪೂರಕವಾಗಿಲ್ಲ. ಅಂದರೆ ಸ್ವಾತಂತ್ರ ನಂತರದ ಅಭಿವೃದ್ಧಿ ಯೋಜನೆಗಳು ಏನನ್ನು ಸಾಧಿಸಲಿಲ್ಲ ಎಂದು ಇದರ ಅರ್ಥವಲ್ಲ. ಬಹಳಷ್ಟು

ಸಾಧನೆಗಳಾಗಿವೆ. ಆದರೆ ಈ ಸಾಧನೆಗಳು ಸಮಾಜದ ಕೆಲವೇ ಜನರಿಗೆ ಸೀಮಿತವಾಗಿರುವುದು ಒಂದು ಲೋಪವಾದರೆ, ಈ ಸೀಮಿತ ಅಭಿವೃದ್ಧಿಯನ್ನು ಕೂಡಾ ನಮ್ಮ ಪರಿಸರವನ್ನು ಗಣನೀಯವಾಗಿ ನಾಶ ಮಾಡುವುದರ ಮೂಲಕ ಸಾಧಿಸಲಾಗಿದೆ ಎನ್ನುವುದು ಮತ್ತೊಂದು ಲೋಪವಾಗಿದೆ. ಈ ರೀತಿಯ ಅಭಿವೃದ್ಧಿಗೆ ಪ್ರತಿಕ್ರಿಯೆಗಳಾಗಿ ಹುಟ್ಟಿಕೊಂಡ ಪರಿಸರ ಚಳವಳಿಗಳು ಇಂದು ಸಾಮಾಜಿಕ ಚಳವಳಿಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಮೇಲ್ನೋಟಕ್ಕೆ ಈ ಚಳುವಳಿಗಳು ಔದ್ಯಮೀಕರಣದ ದುಷ್ಪರಿಣಾಮಗಳನ್ನು ವಿರೋಧಿಸುವಂತೆ ಕಂಡರೂ, ಅದು ಅಷ್ಟೇ ಆಗಿಲ್ಲ. ಆಳದಲ್ಲಿ ಇವು ಆಧುನೀಕರಣದ ವಿಫಲತೆಗೆ ಪ್ರತಿಕ್ರಿಯೆಗಳಾಗಿವೆ. ಈ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಪರಿಸರ ಸಂಬಂಧಿತ ಚಳವಳಿಗಳ ಸಂದರ್ಭದಲ್ಲಿ ರೂಪುಗೊಂಡ ವಿಚಾರಗಳನ್ನು ನಾವಿಂದು ವಿಮರ್ಶಿಸಬೇಕಾಗಿದೆ.

ಕೈಗಾರಿಕೆಗಳು ಪರಿಸರ ಮಾಲಿನ್ಯದ ಮೊದಲ ಕಾರಣವೆಂದು ಪರಿಸರವಾದಿಗಳು ಗುರುತಿಸುತ್ತಾರಷ್ಟೆ. ಇದರಲ್ಲಿ ಸ್ವಲ್ಪ ಮಟ್ಟಿನ ಸತ್ಯಾಂಶವಿದೆ. ಆದರೆ, ಇದು ಮಾತ್ರವಲ್ಲದೆ ಇತರ ಹಲವಾರು ಕಾರಣಗಳೂ ಕೂಡ ಪರಿಸರ ಸಮಸ್ಯೆಯನ್ನು ಉಲ್ಬಣಗೊಳಿಸುವಲ್ಲಿ ಸಹಾಯಕವಾಗಿವೆ ಎನ್ನುವ ಅಂಶವನ್ನು ನಮ್ಮ ಪರಿಸರವಾದಿಗಳು ಅಷ್ಟಾಗಿ ಗಮನಿಸಿದಂತೆ ಕಾಣುವುದಿಲ್ಲ. ಕೈಗಾರಿಕೀಕರಣ ಅಥವಾ ಬಂಡವಾಳದ ವೃದ್ಧಿ ಅದರಷ್ಟಕ್ಕೆ ಅದು ಸಾಧ್ಯವಾಗುವ ಪ್ರಕ್ರಿಯೆಯಲ್ಲ. ಇದು ಸಾಧ್ಯವಾಗಬೇಕಾದರೆ ಎಲ್ಲಾ ಸ್ತರಗಳಲ್ಲಿ ಬಂಡವಾಳದ ವೃದ್ಧಿಗೆ ಅನುಕೂಲವಾದ ವಾತಾವರಣ ನಿರ್ಮಾಣವಾಗುವುದು ಅಗತ್ಯ. ಅದು ಕೆಲವೊಂದು ದೇಶಗಳಲ್ಲಿ ಅದರಲ್ಲೂ ಪಶ್ಚಿಮ ಯುರೋಪಿನ ದೇಶಗಳ ಮಟ್ಟಿಗೆ ಹೇಳುವುದಾದರೆ ಅಲ್ಲಿಯ ಸಹಜ ಚಾರಿತ್ರಿಕ ಬೆಳವಣಿಗೆ ಎಂದು ತಿಳಿಯಬಹುದು. ಆದರೆ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ `ಅಭಿವೃದ್ಧಿ'ಯ ಕಲ್ಪನೆ ಮತ್ತು ಅದಕ್ಕೆ ಪೂರಕವಾದ ಉತ್ಪಾದನಾ ಕ್ರಮಗಳು ಸಹಜವಾಗಿ ವಿಕಾಸಗೊಂಡವುಗಳಲ್ಲ. ಯುರೋಪಿಯನ್ ದೇಶಗಳಲ್ಲಿ ಉತ್ಪಾದನಾ ತಂತ್ರಗಳು ಮತ್ತು ಅದಕ್ಕೆ ಪೂರಕವಾದ ಸಾಂಸ್ಥಿಕ ಚೌಕಟ್ಟುಗಳು, ಮೌಲ್ಯಗಳು ಮತ್ತು ವ್ಯವಹಾರಗಳು ಜೊತೆ ಜೊತೆಗೇ ಚಾರಿತ್ರಿಕವಾಗಿ ರೂಪುಗೊಂಡವು. ನಮ್ಮಲ್ಲಿ ಆಧುನಿಕ ಉತ್ಪಾದನಾ ತಂತ್ರಗಳನ್ನು ಮೊದಲು ಅಳವಡಿಸುವ ಮೂಲಕ ಉಳಿದ ಸಾಂಸ್ಥಿಕ ಚೌಕಟ್ಟುಗಳು ಮತ್ತು ಮೌಲ್ಯಗಳು ತಂತಾನೇ ರೂಪುಗೊಳ್ಳುತ್ತವೆ ಎನ್ನುವ ಗೃಹೀತದೊಂದಿಗೆ ತಾಂತ್ರಿಕ ಆಧುನೀಕರಣವನ್ನು ಆರಂಭಿಸಲಾಯಿತು. ಆದರೆ ನಮ್ಮ ತಾಂತ್ರಿಕ ಆಧುನೀಕರಣವು ತನ್ನ ಗುರಿಗಳನ್ನು ಸಾಧಿಸುವಲ್ಲಿ ಸಂಪೂರ್ಣ ವಿಫಲವಾಗಿದೆ ಮತ್ತು ಆಧುನಿಕತೆ, ಸಾಂಪ್ರದಾಯಿಕತೆಗಳ ನಡುವಣ ಸಂಕೀರ್ಣ ಸಾಮಾಜಿಕ ಸ್ಥಿತಿಯೊಂದನ್ನು ನಿರ್ಮಿಸಿದೆ. ಪರಿಸರವಾದಗಳು ಈ ಅಂಶವನ್ನು ಅಗತ್ಯವಾಗಿ ಗಮನಕ್ಕೆ ತಂದುಕೊಳ್ಳಲೇಬೇಕು. ಆದರೆ, ಇದನ್ನು ಗಮನಿಸದೇ ಒಟ್ಟಾರೆಯಾಗಿ ಮಾತನಾಡುವ ಮೂಲಕ ಪರಿಸರ ಚಳುವಳಿ ಸಂದರ್ಭದಲ್ಲಿ ಹುಟ್ಟಿಕೊಂಡ ವಿಚಾರಗಳ ಆಳದಲ್ಲಿ ಅಡಗಿರುವ ವರ್ಗ/ಜಾತಿ ಪ್ರಶ್ನೆಗಳು ನಿಖರವಾಗಿ ಬೆಳಕಿಗೆ ಬಂದಿಲ್ಲ. ಖಾಸಗೀ ಬಂಡವಾಳದ ವಿಸ್ತರಣೆ ಮತ್ತು ಅದರಿಂದ ಪ್ರಭಾವಿತವಾದ ಜೀವನಶೈಲಿ, ವಸ್ತು/ಸೇವೆಗಳ ಉಪಭೋಗದಲ್ಲಿ ನಿಯಂತ್ರಣ ಹಾಗೂ ಸಂಯಮಗಳಿಲ್ಲದೆ ಇರುವುದು ಇವೇ ಮುಂತಾದವುಗಳು ಜನಸಾಮಾನ್ಯರನ್ನು

ತಲುಪುವ ರೀತಿಯಲ್ಲಿ ಪ್ರಚಾರ ಪಡೆಯುತ್ತಿವೆ. ಆದರೆ ಇವತ್ತು ಮುಖ್ಯವಾಗಿ ಆಗಬೇಕಾದ ಕೆಲಸವೆಂದರೆ ಈ ರೀತಿಯ ಅನುಭೋಗ ಶೈಲಿ ಯಾವ ವರ್ಗದ್ದು ಎಂಬ ಪ್ರಶ್ನೆಯನ್ನು ಕೇಳುವುದು. ಪರಿಸರ ಮಾಲಿನ್ಯಕ್ಕೆ ಜಾಗತಿಕ ಮಟ್ಟದಲ್ಲಿ ಶ್ರೀಮಂತ ರಾಷ್ಟ್ರಗಳ ಜೀವನಶೈಲಿ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಶ್ರೀಮಂತ ವರ್ಗದ ಜೀವನ ಶೈಲಿ ಕಾರಣವಾದಷ್ಟು ಬಡರಾಷ್ಟ್ರಗಳು ಮತ್ತು ಬಡವರ್ಗಗಳು ಕಾರಣವಲ್ಲದಿರಬಹುದು. ಸ್ಥಳೀಯ ಚರ್ಚೆಗಳಲ್ಲಿ ಶ್ರೀಮಂತ ರಾಷ್ಟ್ರಗಳ ಅನುಭೋಗ ಶೈಲಿ ಮತ್ತು ಅದು ನಮ್ಮ ಬರಿದಾಗುವ ಪ್ರಕೃತಿ ಸಂಪತ್ತಿನ ಮೇಲೆ ಮಾಡುವ ಒತ್ತಡದ ವಿಚಾರದಲ್ಲಿ ಧಾರಾಳ ಚರ್ಚೆಯಾಗುತ್ತಿವೆ. ದುರಂತವೆಂದರೆ ಅಂತಹುದೆ ಜೀವನ ಶೈಲಿಯನ್ನು ಹೋಲುವ ವರ್ಗಗಳು ನಮ್ಮಲ್ಲಿಯೇ ಇವೆ. ಅವುಗಳು ಸಮುದಾಯದ ಸಂಪನ್ಮೂಲಗಳನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುವ ಬಗೆಗಿನ ತಂತ್ರಗಾರಿಕೆಗಳ ಕುರಿತ ಚರ್ಚೆ ನಡೆಯುತ್ತಿಲ್ಲ.

ಮೂರನೆಯದಾಗಿ ತೃತೀಯ ಜಗತ್ತಿನ ರಾಷ್ಟ್ರಗಳು ತಮ್ಮ ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಆರ್ಥಿಕ ಮತ್ತು ರಾಜಕೀಯ ನೀತಿಗೆ ಅನುಗುಣವಾಗಿ ಮತ್ತು ಅವುಗಳಿಗೆ ಅವಲಂಬಿತವಾಗಿ ಬೆಳಸಲು ಪ್ರಯತ್ನಿಸುವುದು ಕೂಡ ಪರಿಸರ ಸಂಬಂಧಿತ ವಿಚಾರವೇ. ಈ ಅವಲಂಬನೆಯ ಸ್ಥಿತಿ ಆಯಾಯ ದೇಶದ ಬೇಕು ಬೇಡಗಳ ಮೇಲೆ ನಿರ್ಧಾರವಾಗುವುದಿಲ್ಲ. ಬಹುತೇಕ ಸಂದರ್ಭದಲ್ಲಿ ಬಂಡವಾಳದ ಅಂತರ್‌ರಾಷ್ಟ್ರೀಯ ಚಲನೆಯ ಪರಿಣಾಮವಾಗಿ ರೂಪುಗೊಂಡಿದೆ. ಆದರೆ ಅದು ಕೇವಲ ಅರ್ಥ ವ್ಯವಸ್ಥೆಯ ಪ್ರಕ್ರಿಯೆಗಳಾಗಿ ಅಭಿವ್ಯಕ್ತಗೊಳ್ಳುವುದಿಲ್ಲ, ಬದಲಿಗೆ ರಾಜಕೀಯ ಒತ್ತಡಗಳು ಈ ವಿಚಾರದಲ್ಲಿ ಗಣನೀಯ ಪ್ರಮಾಣದ ಪ್ರಭಾವವನ್ನು ಬೀರುತ್ತವೆ. ಸ್ವಾತಂತ್ರ್ಯಾನಂತರದಲ್ಲಿ ನಾವು ಅನುಸರಿಸಿದ ಅಧುನೀಕರಣ ಪ್ರಕ್ರಿಯೆ ಇರಬಹುದು ಅಥವಾ ಈಗ ಚಾಲ್ತಿಯಲ್ಲಿರುವ ಸ್ವಯಂತಂತ್ರವಾದೀ ನಿಲುವಿರಬಹುದು - ಇವುಗಳು ನಮ್ಮ ಆಂತರಿಕ ಅಗತ್ಯ ಅಥವಾ ಬೇಕು ಬೇಡಗಳಿಗೆ ಅನುಗುಣವಾಗಿ ನಡೆದಿವೆ ಎಂದು ತಿಳಿಯುವುದು ಸರಿಯಲ್ಲ. ಕೊನೆಯದಾಗಿ ಆಧುನೀಕರಣದ ವಿಫಲತೆಯನ್ನು ಪ್ರತಿಭಟಿಸುವ ಭರದಲ್ಲಿ ಇಂದು ಬಂಡವಾಳಪೂರ್ವ ವ್ಯವಸ್ಥೆಯನ್ನು ಮತ್ತು ಅದರ ಸಂಸ್ಕೃತಿಯನ್ನು ವೈಭವೀಕರಿಸುವ ಒಂದು ಪ್ರವೃತ್ತಿ ಪರಿಸರವಾದದ ವ್ಯಾಪ್ತಿಯೊಳಗೆ ಕಂಡು ಬರುತ್ತಿದೆ. ನಮ್ಮ ಸಂಸ್ಕೃತಿಯನ್ನು ವೈಭವೀಕರಿಸುವುದು ತಪ್ಪೇನಲ್ಲ ಸಾಮಾಜಿಕ ಚಳುವಳಿಗಳಲ್ಲಿ ಸಾಂಸ್ಕೃತಿಕ ಅಂಶಗಳನ್ನು ಬಳಸಿಕೊಳಯಳ್ಳುವುದು ಹೊಸತೇನಲ್ಲ. ಆದರೆ, ಇಂದಿನ ರಾಜಕೀಯ ಸಂದರ್ಭದಲ್ಲಿ ನಮ್ಮ ಸಂಸ್ಕೃತಿ ಎಂಬ ಪದದ ಬಳಕೆಯು ಹಿಂದೂ ರಾಷ್ಟ್ರೀಯವಾದಿಗಳ ಸಂಸ್ಕೃತಿಗಿಂತ ಭಿನ್ನವಾದ ಅರ್ಥ ಕೊಡುವುದು ಕಷ್ಟಕರ. ಔದ್ಯಮೀಕರಣವನ್ನು ಮತ್ತು ಅದರ ಪರಿಣಾಮವಾಗಿ ಹುಟ್ಟಿಕೊಂಡಿದೆ ಎನ್ನುವ ಸರಕು/ಸೇವೆಗಳ ಅನುಭೋಗ ಸಂಸ್ಕೃತಿಯನ್ನು ಪ್ರತಿಭಟಿಸುವ ನಲೆಯಲ್ಲಿ ನಮ್ಮ ಸಂಸ್ಕೃತಿಯ ಬೇರುಗಳನ್ನು ಹುಡುಕಬೇಕು. ಅದರಲ್ಲೂ ಸತ್ಯವಿದೆ, ಅರ್ಥವಿದೆ ಎನ್ನುವ ಮಾತುಗಳು ನಮ್ಮನ್ನು ನೇರವಾಗಿ ಫ್ಯಾಸಿಸ್ಟ್ ವಾದಗಳತ್ತ ಒಯ್ಯಬಹುದು. ಸಂಸ್ಕೃತಿ ಪದದ ಈ ರೀತಿಯ ಬಳಕೆ ಪರದೇಶಿ ಸಂಸ್ಕೃತಿಗೆ ಮಾತ್ರ ವಿರೋದವಲ್ಲ ಜೊತೆಗೆ ಅಲ್ಪಸಂಖ್ಯಾತ ಮತ್ತು

ಹಿಂದೂಗಳಲ್ಲಿನ ಕೆಳವರ್ಗದ ಜನರ ಸಂಸ್ಕೃತಿಗೂ ವಿರೋಧವನ್ನು ಒಳಗೊಂಡಿದೆ. ಸಂಸ್ಕೃತಿವಾದವನ್ನು ಇನ್ನೊಂದು ನೆಲೆಯಿಂದ ಕೂಡಾ ಎತ್ತಲಾಗಿದೆ. ಸ್ಥಳೀಯ ಮತ್ತು ಸಮುದಾಯಗಳ ಸಂಸ್ಕೃತಿಗಳಿಗೆ ಇಲ್ಲಿ ಒತ್ತು ಕೊಡಲಾಗಿದೆ. ಹಿಂದೂ ಸಂಸ್ಕೃತಿವಾದಕ್ಕೂ ಈ ಸಂಸ್ಕೃತಿವಾದಕ್ಕೂ ವ್ಯತ್ಯಾಸವಿದೆ ಎಂದು ಹೇಳಲಾಗುತ್ತಿದೆಯಾದರೂ ಅವುಗಳ ನಡುವಿನ ವ್ಯತ್ಯಾಸ ತೀರಾ ತೆಳುವಾದುದು ಮತ್ತು ಗೊಂದಲಪೂರಿತವಾದುದು. ಎರಡೂ ವಾದಗಳ ನಡುವಿನ ಸಾಮ್ಯ ಮಾತ್ರ ಎದ್ದು ಕಾಣುವಂತಹುದು. ಸಮಾಜ/ಸಂಸ್ಕೃತಿಗಳ ಚಾರಿತ್ರಿಕ ರೂಪುಗೊಳ್ಳುವಿಕೆಯನ್ನು ಇವೆರಡೂ ಅಷ್ಟಾಗಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪರಿಸರವಾದದೊಂದಿಗೆ ತೂರಿಕೊಳ್ಳುವ ಈ ಬಗೆಯ ಸಂಸ್ಕೃತಿಯ ಪರಿಕಲ್ಪನೆಯ ವಿಶ್ಲೇಷಣೆಯನ್ನು ಕೂಡ ಪ್ರಸ್ತುತ ಬರೆಹ ಒಳಗೊಂಡಿದೆ. ಮುಂದಿನ ಪುಟಗಳಲ್ಲಿ ಅಭಿವೃದ್ಧಿಯ ಪರಿಕಲ್ಪನೆ ರೂಪುಗೊಂಡ ಬಗೆ ಮತ್ತು ಅದನ್ನು ಯಾವ ಸಂದರ್ಭದಲ್ಲಿ ನಮ್ಮದಾಗಿಸಿಕೊಂಡಿದ್ದೇವೆ ಎಂಬುದನ್ನು ಚರ್ಚಿಸಿದ್ದೇನೆ. ಅಭಿವೃದ್ಧಿಯ ಪುನರ್ ವ್ಯಾಖ್ಯಾನ ಸಾಧ್ಯವೇ? ಸಾಧ್ಯವಾಗದಿದ್ದರೆ ಯಾಕೆ ಸಾಧ್ಯವಾಗುತ್ತಿಲ್ಲ? ಎನ್ನುವುದರತ್ತ ಗಮನ ಹರಿಸಿದ್ದೇನೆ.

## ಅಭಿವೃದ್ಧಿಯ ಪುನರ್‌ವ್ಯಾಖ್ಯಾನ

ನಾವು ಅಂತರ್ಗತಗೊಳಿಸಲು ಪ್ರಯತ್ನಿಸುವ ಅಭಿವೃದ್ಧಿಯ ಪರಿಕಲ್ಪನೆ ನಮ್ಮ ಪರಿಸರದ ಚಾರಿತ್ರಿಕ ಬೆಳವಣಿಗೆಯೇ? ಅಲ್ಲದಿದ್ದ ಪಕ್ಷದಲ್ಲಿ ಬೇರೆ ಪರಿಸರದಲ್ಲಿ ರೂಪುಗೊಂಡ ಅಭಿವೃದ್ಧಿಯ ಪರಿಕಲ್ಪನೆಯನ್ನು ಅಳವಡಿಸಿಕೊಳ್ಳುವ ಅನಿವಾರ್ಯತೆ ಏನು? ನಮಗೆ ಬೇಕಾದ ರೀತಿಯಲ್ಲಿ ಅಭಿವೃದ್ಧಿಯನ್ನು ವ್ಯಾಖ್ಯಾನಿಸಿಕೊಳ್ಳುವಲ್ಲಿ ಸಮಸ್ಯೆಯೇನು? ಇವೇ ಮುಂತಾದ ಪ್ರಶ್ನೆಗಳು ಪರಿಸರ ಸಮಸ್ಯೆಯ ಚರ್ಚೆಯಲ್ಲಿ ಮುಖ್ಯವಾಗಿವೆ. ಅಭಿವೃದ್ಧಿ ವ್ಯಾಖ್ಯಾನ ಕುರಿತ ಈ ವಿಧದ ಚರ್ಚೆ ಭಾರತದಲ್ಲಿ ಹೊಸತೇನಲ್ಲ. ಯೋಜಿತ ಅಭಿವೃದ್ಧಿಯ ಆರಂಭದ ದಿನಗಳಿಂದಲೇ ಅಭಿವೃದ್ಧಿ ವ್ಯಾಖ್ಯಾನ ಅಥವಾ ಅದು ನಮ್ಮಲ್ಲಿ ಕಾರ್ಯರೂಪಕ್ಕೆ ಬರುವ ರೀತಿ ಕುರಿತು ಧಾರಾಳ ಚರ್ಚೆಯಾಗುತ್ತಿತ್ತು. ಆದರೆ, ಇಂದಿನ ಪರಿಸರ ಚಳುವಳಿ ಸಂದರ್ಭದಲ್ಲಿ ಈ ಬಗೆಗಿನ ಚರ್ಚೆ ಕೇವಲ ಅಕಾಡೆಮಿಕ್ ಪ್ರಶ್ನೆಗಳಾಗಿಯೇ ಉಳಿದಿಲ್ಲ. ಜನರ ಮುಂದೆಂದು ಒಂದು ನಂಬಿಕೆಯಾಗುವಷ್ಟರ ಮಟ್ಟಿಗೆ ಆಳಕ್ಕೆ ಇಳಿದಿದೆ. ಈ ರೀತಿಯ ಬೆಳವಣಿಗೆ ಸರಿಯೇ, ತಪ್ಪೇ ಎನ್ನುವುದನ್ನು ಕೆದಕಲು ನಾನಿಲ್ಲಿ ಇಷ್ಟ ಪಡುವುದಿಲ್ಲ. ಆದರೆ, ಈ ರೀತಿಯ ತಿಳುವಳಿಕೆ ಎಷ್ಟರ ಮಟ್ಟಿಗೆ ಬಂಡವಾಳದ ಅಂತಾರಾಷ್ಟ್ರೀಯ ಚಲನೆ ಮತ್ತು ಪ್ರಭಾವದ ತಿಳುವಳಿಕೆಯ ಹಿನ್ನೆಲೆಯಲ್ಲಿ ರೂಪುಗೊಂಡಿದೆ ಎನ್ನುವುದು ಕೂಡ ಮುಖ್ಯವಾಗುತ್ತದೆ. ಬಹುತೇಕ ಸಂದರ್ಭದಲ್ಲಿ ನಮ್ಮಲ್ಲಿ ಇಂತಹ ನಿರ್ಧಾರಗಳ ಆಳದಲ್ಲಿ ಹಲವಾರು ಸಾಮಾನ್ಯ ತಿಳುವಳಿಕೆಗಳು ಕೆಲಸ ಮಾಡುತ್ತಿರುತ್ತವೆ. ಇವುಗಳ ಪೈಕಿ `ಇದು ನಮ್ಮ ದೇಶ; ನಮ್ಮ ದೇಶದ ಅರ್ಥ ಅಥವಾ ರಾಜಕೀಯ ವ್ಯವಸ್ಥೆಗೆ ಸಂಬಂಧಿಸಿದ ನೀತಿ ನಿಯಮಗಳನ್ನು ನಮಗೆ ಬೇಕಾದ ರೀತಿಯಲ್ಲಿ

ರೂಪಿಸುವಲ್ಲಿ ಇನ್ನೊಬ್ಬರ ಹಂಗು ಯಾಕೆ?' ಎನ್ನುವ ಮುಗ್ಧ ಧೋರಣೆಯು ಒಂದಾಗಿದೆ. ನಮ್ಮ ವ್ಯವಸ್ಥೆಯನ್ನು ನಮಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳುವಲ್ಲಿ ಯಾರ ಮುಲಾಜು ಇಲ್ಲ ಅದು ಸರಿ. ಆದರೆ, ಒಬ್ಬ ವ್ಯಕ್ತಿಯ ವ್ಯವಹಾರಗಳು ಅವನು ಬದುಕುವ ಸಮಾಜದಿಂದ ಪ್ರಭಾವಿತಗೊಂಡಿರುತ್ತವೆ. ಒಂದು ದೇಶದ ಅರ್ಥ ಅಥವಾ ರಾಜಕೀಯ ನೀತಿಗಳು ಪ್ರಪಂಚದ ಇತರ ದೇಶಗಳ ಅರ್ಥ, ರಾಜಕೀಯ ಮತ್ತು ಇತರ ನೀತಿಗಳ ಪ್ರಭಾವಕ್ಕೆ ಒಳಗಾಗಬೇಕಾಗುತ್ತದೆ. ಈ ಬಗೆಯ ಸಾಮಾನ್ಯ ತಿಳುವಳಿಕೆ ಇದ್ದರೆ ಯಾವುದೇ ದೇಶ ಕೂಡ ಒಂದು ದ್ವೀಪದಂತೆ ಇರಲು ಸಾಧ್ಯವಿಲ್ಲ ಎನ್ನುವುದು ಅರಿವಾಗುತ್ತದೆ. ಅದು ಹೇಗೆ ಎಂಬುದನ್ನು ಮುಂದೆ ವಿವರಿಸಿದ್ದೇನೆ.

ಕೈಗಾರಿಕಾ ಕ್ರಾಂತಿಯ ಒಂದು ವಿವರಣೆಯೇ ಆಧುನೀಕರಣ ಸಿದ್ಧಾಂತಗಳ ಅಡಿಪಾಯವಾಗಿದೆ. ಈ ಸಿದ್ಧಾಂತಗಳು ಬಂಡವಾಳದ ವೃದ್ಧಿಯನ್ನೇ ಅಭಿವೃದ್ಧಿಯೆಂದು ವ್ಯಾಖ್ಯಾನಿಸುವುದರ ಮೂಲಕ ಬಂಡವಾಳಶಾಹೀ ಉತ್ಪಾದನಾ ಕ್ರಮವನ್ನು ೧೯೪೫ರ ನಂತರ ಪ್ರಪಂಚದ ಬಹುತೇಕ ರಾಷ್ಟ್ರಗಳು ಅದರಲ್ಲೂ ತೃತೀಯ ಜಗತ್ತಿನ ರಾಷ್ಟ್ರಗಳು ಅಳವಡಿಸಿಕೊಳ್ಳುವಂತೆ ಪ್ರಭಾವವನ್ನು ಬೀರಿವೆ. ಬಂಡವಾಳದ ವೃದ್ಧಿಯನ್ನು ಯಾವ ರೀತಿಯಲ್ಲಿ ಅಭಿವೃದ್ಧಿಯೆಂದು ತಿಳಿಯಲಾಯಿತು, ಈ ಪ್ರಕ್ರಿಯೆಯಲ್ಲಿ ಅಂತಾರಾಷ್ಟ್ರೀಯ ರಾಜಕೀಯ ಹಾಗೂ ಆರ್ಥಿಕ ಸ್ಥಿತಿಗತಿಗಳು ಪ್ರತೀ ದೇಶದ ಆಂತರಿಕ ನೀತಿಗಳ ಮೇಲೆ ಯಾವ ರೀತಿಯ ಪ್ರಭಾವ ಬೀರುತ್ತವೆ ಇವೇ ಮುಂತಾದ ವಿಚಾರಗಳನ್ನು ತಿಳಿಯುವುದು ಅಗತ್ಯವಾಗಿದೆ. ಅದುದರಿಂದ ಇಲ್ಲಿಯ ವಿವರಣೆಯನ್ನು ಕೈಗಾರಿಕಾ ಕ್ರಾಂತಿಯ ವಿವರಣೆಯೊಂದಿಗೆ ಪ್ರಾರಂಭಿಸುತ್ತಿದ್ದೇನೆ. ಕ್ರಾಂತಿಯ ಕಾರಣಗಳನ್ನು ಮತ್ತು ಪರಿಣಾಮಗಳನ್ನು ವಿವರಿಸುವ ಮೂಲಕ ಈಗ ಪ್ರಚಾರದಲ್ಲಿರುವ ಅಭಿವೃದ್ಧಿಯ ವ್ಯಾಖ್ಯಾನಗಳ ಮೂಲರೂಪವನ್ನು ಅರ್ಥ ಮಾಡಿಕೊಳ್ಳಬಹುದು. ಉಳಿಗಮಾನ್ಯ ವ್ಯವಸ್ಥೆಯ ಅವನತಿಗೆ ಮುಖ್ಯ ಕಾರಣವನ್ನು ಗುರುತಿಸುವ ವಿಚಾರದಲ್ಲಿ ಬಹುದೊಡ್ಡ ಚರ್ಚೆ ನಡೆದಿದೆ. ಅದು ಹಲವಾರು ಪ್ರಮುಖ ವಿಚಾರಗಳ ಹುಟ್ಟಿಗೂ ಕಾರಣವಾಗಿದೆ. ಈ ವ್ಯವಸ್ಥೆಯ ಅವನತಿಯಲ್ಲಿ ಯಾವ ಅಂಶ ಪ್ರಮುಖ ಪಾತ್ರ ವಹಿಸಿದೆ ಎನ್ನುವುದರ ಕುರಿತು ಎಡಪಂಥೀಯರಲ್ಲಿ ವಿಭಿನ್ನ ದೋರಣೆಗಳಿವೆ. ಸಾಂಪ್ರದಾಯಿಕರು ಊಳಿಗಮಾನ್ಯ ವ್ಯವಸ್ಥೆಯ ಆಂತರಿಕ ವೈರುದ್ಧ್ಯಗಳಿಗೆ ಮಹತ್ವಕೊಟ್ಟರೆ ನಿಯೊ-ಮಾರ್ಕ್ಸಿಸ್ಟರು ವ್ಯಾಪಾರದ ಪಾತ್ರ ಕೂಡ ಮಹತ್ವದ್ದು ಎಂದು ಅಭಿಪ್ರಾಯ ಪಡುತ್ತಾರೆ. ಕ್ಲಾಸಿಕಲ್ ಮಾರ್ಕ್ಸಿಸ್ಟರು ವ್ಯಾಪಾರ ಪಾತ್ರವನ್ನು ಅಲ್ಲಗಳೆಯುವುದಿಲ್ಲ ಅದರೆ, ಅದು ಪ್ರಮುಖ ಪಾತ್ರವಹಿಸಿದೆ ಎಂಬುದನ್ನು ಒಪ್ಪುವುದಿಲ್ಲ. ಅವರ ವಾದದ ಸಾರ ಇಷ್ಟು: ಹಲವಾರು ದೇಶಗಳಲ್ಲಿ ವ್ಯಾಪಾರ ಪಶ್ಚಿಮ ಯೂರೋಪಿಗಿಂತಲೂ ಬಲವಾಗಿಯೇ ಇತ್ತು. ಆದರೆ, ಆ ದೇಶಗಳಲ್ಲಿ ಉಳಿಗಮಾನ್ಯ ವ್ಯವಸ್ಥೆ ಅವನತಿ ಆಗಲಿಲ್ಲ. ಬಂಡವಾಳ ವ್ಯವಸ್ಥೆ ಹುಟ್ಟಿಕೊಳ್ಳಲೂ ಇಲ್ಲ. ಜತೆಗೆ ವ್ಯಾಪಾರ ಹಣದ ಉಪಯೋಗವನ್ನು ಜಾರಿಗೆ ತಂದು ಫ್ಯೂಡಲ್ ದೊರೆಗಳಿಗೆ ತಾವು ಪಡೆದ ಭೂಮಿಗೆ ಪ್ರತಿ ಊಳಿಗವಾಗಿ ರೈತರು ಗೇಣಿಯನ್ನು, ಗೆಯ್ಮೆಯನ್ನು ಹಣ ಸಂದಾಯ ಮಾಡುವುದರ ಮೂಲಕ ಆ ವ್ಯವಸ್ಥೆಯ ಬಂಧನವನ್ನು ಹಂತ ಹಂತವಾಗಿ ಸಡಿಲಗೊಳಿಸಿಲು ಸಾಧ್ಯವಾಯಿತು ಎನ್ನುವ ವಾದವನ್ನು ಕೂಡ ಅವರು

ವಿರೋಧಿಸುತ್ತಾರೆ. ಅವರ ಪ್ರಕಾರ ಯಾವುದೇ ವ್ಯವಸ್ಥೆಯ ಪರಿವರ್ತನೆಯಲ್ಲಿ ಆ ವ್ಯವಸ್ಥೆಯ ಹೊರಗಿನ ಪ್ರಭಾವ ಇಲ್ಲವೆಂದಲ್ಲ; ಅದರೆ ವ್ಯವಸ್ಥೆಯ ಒಳಗಿನ ವೈರುದ್ಧ್ಯಗಳೇ ಅತಿ ಮುಖ್ಯ ಪಾತ್ರವಹಿಸುತ್ತವೆ. ಊಳಿಗಮಾನ್ಯ ವ್ಯವಸ್ಥೆ ಆದರ ಪುನರುತ್ಪತ್ತಿಗೆ ಅವಶ್ಯವಾದ ಉತ್ಪಾದನೆಯನ್ನು ಪೂರೈಸಲು ವಿಫಲವಾಗುವುದರೊಂದಿಗೆ ಅದರ ಅವನತಿಗೆ ನಾಂದಿಯಾಯಿತು ಎನ್ನುವುದೇ ಅವರ ವಾದ. ಅದರೆ ಈ ವಿವರಣೆಯನ್ನು ಸ್ವಯಂ ತಂತ್ರವಾದಿಗಳೆಂದು ಗುರುತಿಸಬಹುದಾದ ಸಮಾಜಶಾಸ್ತ್ರಜ್ಞರು ಮತ್ತು ಅರ್ಥಶಾಸ್ತ್ರಜ್ಞರು ಒಪ್ಪುವುದಿಲ್ಲ. ಈ ಬಗ್ಗೆ ಅವರ ಪ್ರಮುಖ ಟೀಕೆ ಎಂದರೆ ಎಡಪಂಥೀಯರು ಇಡೀ ಪರಿವರ್ತನೆಯನ್ನು ಉತ್ಪಾದನಾ ಸಂಬಂಧಗಳ ಮೂಲಕ ನೋಡಲು ಪ್ರಯತ್ನಿಸುತ್ತಿದ್ದಾರೆ ಎನ್ನುವುದಾಗಿದೆ. ಉತ್ಪಾದನಾ ಸಂಬಂಧಗಳ ಮೂಲಕ ಪರಿವರ್ತನೆಯನ್ನು ಅರ್ಥಮಾಡಿ ಕೊಳ್ಳುವುದು ತಪ್ಪಲ್ಲ. ಆದರೆ, ಅದುವೇ ಪರಿಪೂರ್ಣವಾದ ವಿವರಣೆ ಎನ್ನುವುದನ್ನು ಸ್ವಯಂ ತಂತ್ರವಾದಿಗಳು ವಿರೋಧಿಸುತ್ತಾರೆ. ಅವರ ಪ್ರಕಾರ ಈ ಪರಿವರ್ತನೆಯಲ್ಲಿ ಮೇಲ್ ರಚನೆಗಳ ಪಾತ್ರಕೂಡ ಮಹತ್ವದಾಗಿವೆ. ಈ ರೀತಿಯ ವಾದವನ್ನು ಮುಂದಿಟ್ಟವರಲ್ಲಿ ಮ್ಯಾಕ್ಸ್ ವೇಬರ್ ಅಗ್ರಗಣ್ಯ. ಇತರ ಹಲವಾರು ಬೆಳವಣಿಗೆಗಳ ಜೊತೆಗೆ ಧಾರ್ಮಿಕ ವಿಚಾರಗಳೂ ಕೂಡ ಬಂಡವಾಳ ಶಾಹಿ ಉತ್ಪಾದನಾ ವ್ಯವಸ್ಥೆಯ ಉಗಮಕ್ಕೆ ಕಾರಣವಾಗಿದೆ ಎಂದವನು ಹೇಳುತ್ತಾನೆ. ಮುಖ್ಯವಾಗಿ ಲೆಕ್ಕಶಾಸ್ತ್ರದ ಬೆಳವಣಿಗೆ, ಶ್ರಮಿಕ ವರ್ಗದ ರೂಪುಗೊಳ್ಳುವಿಕೆ, ಆಡಳಿತಶಾಹಿಯ ಉಪಯೋಗ ಇವೇ ಮುಂತಾದ ವಿಚಾರಗಳು ಕೂಡ ಹೊಸ ವ್ಯವಸ್ಥೆಯ ರೂಪುಗೊಳ್ಳುವಿಕೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿವೆ ಎನ್ನುವುದು ಅವನ ಅಭಿಪ್ರಾಯ.

ಮ್ಯಾಕ್ಸ್‌ವೇಬರ್ ಗುರುತಿಸಿದ ಮೇಲ್‌ರಚನೆಯ ಅಂಶಗಳನ್ನು ಹಿಡಿದು ಅಧುನಿಕ ಸಮಾಜದ ಗುಣಗಳನ್ನು ಅದರ ಹಿಂದಿನ ಸಮಾಜದ ಗುಣಗಳಿಗೆ ಹೋಲಿಸಿ ಸಾಮಾಜಿಕ ಪರಿವರ್ತನೆಯ ಥಿಯರಿಯನ್ನು ಪ್ರಾರಂಭಿಸಿದವರಲ್ಲಿ ಮುಖ್ಯವಾಗಿ ಟಾಲ್‌ಕಾಟ್ ಪಾರ್ಸನ್‌ನನ್ನು ಗುರುತಿಸಬಹುದು. ಈತನ ಪ್ರಕಾರ : ಸಂಬಂಧ ಆಧಾರಿತ ವ್ಯವಹಾರದ ಬದಲು ಒಪ್ಪಂದ ಆಧಾರಿತ ವ್ಯವಹಾರ, ವ್ಯವಹಾರದಲ್ಲಿ ಹಣದ ಬಳಕೆ, ಅವಿಭಕ್ತ ಕುಟುಂಬಗಳು ಸಡಿಲಗೊಂಡು ವಿಭಕ್ತಕುಟುಂಬಗಳ ರಚನೆ, ಸಹಬಾಳ್ವೆಗಿಂತ ಸ್ಪರ್ಧಾತ್ಮಕ ಬದುಕಿಗೆ ಒತ್ತು, ಸಮುದಾಯಕ್ಕಿಂತ ವ್ಯಕ್ತಿಪ್ರಧಾನ ವ್ಯವಸ್ಥೆಗೆ ಪ್ರಾಧಾನ್ಯತೆ - ಇವೇ ಮುಂತಾದುವು ಆಧುನಿಕ ಸಮಾಜದ ಲಕ್ಷಣಗಳಾಗಿವೆ. ಇವರುಗಳು ಈ ರೀತಿಯ ಪರಿವರ್ತನೆಗೆ ಮುಖ್ಯ ಕಾರಣವನ್ನು ಕೈಗಾರಿಕೀಕರಣದಲ್ಲಿ ಹುಡುಕುತ್ತಾರೆ. ಅದರ ಸ್ಥೂಲ ವಿವರಣೆ ಈ ರೀತಿ ಇದೆ: ಕೈಗಾರಿಕಾ ಕ್ರಾಂತಿಯಲ್ಲೂ ಉತ್ಪಾದನಾ ವಿಧಾನದಲ್ಲೂ ಆದ ಹಲವಾರು ತಾಂತ್ರಿಕ ಆವಿಷ್ಕಾರಗಳ ಪಾತ್ರ ಮಹತ್ತರವಾದುದಷ್ಟೆ. ಈ ತಾಂತ್ರಿಕ ಆವಿಷ್ಕಾರಗಳು ಮೊದಲು ಉತ್ಪಾದನಾ ವಿಧಾನದಲ್ಲಿ ಬದಲಾವಣೆ ತಂದುವು. ಬದಲಾದ ಉತ್ಪಾದನಾ ವಿಧಾನಗಳು ಉತ್ಪಾದನಾ ಸಂಬಂಧಗಳನ್ನು ಗಣನೀಯವಾಗಿ ಬದಲಾಯಿಸಿದುವು. ಆದುದರಿಂದ ಬಂಡವಾಳಶಾಹೀ ಉತ್ಪಾದನಾ ವ್ಯವಸ್ಥೆಯನ್ನು ಅಳವಡಿಸುವುದರಿಂದ ಯಾವುದೇ ಸಮಾಜವನ್ನು ಕೂಡ ಆಧುನೀಕರಣಗೊಳಿಸಬಹುದು ಎನ್ನುವುದೇ ತಾಂತ್ರಿಕ ಆಧುನೀಕರಣವನ್ನು ಆಧರಿಸಿದ ಆಧುನೀಕರಣ ಸಿದ್ಧಾಂತದ ಮುಖ್ಯ

ಅಂಶವಾಗಿದೆ. ಇದರ ಜೊತೆಗೆ ಬಂಡವಾಳಶಾಹಿ ವ್ಯವಸ್ಥೆಯನ್ನು `ಮುಂದುವರಿದ' ಎಂದೂ ಇತರ ಅಂದರೆ ಬಂಡವಾಳಶಾಹಿ ಅಲ್ಲದ ವ್ಯವಸ್ಥೆಯನ್ನು `ಸಾಂಪ್ರದಾಯಿಕ' ಅಥವಾ `ಹಿಂದುಳಿದ' ಎಂದೂ ವರ್ಗೀಕರಿಸಲಾಯಿತು. ಈ ರೀತಿಯ ವಿಂಗಡಣೆಯಲ್ಲಿ ಒಂದು ಮತ್ತೊಂದರಿಂದ ಉತ್ತಮ ಎಂದು ಸಾಧಿಸುವ ಮೂಲಕ ಹೊಸ ವ್ಯವಸ್ಥೆಯು ಇತರರು ಅನುಸರಿಸಲು ಯೋಗ್ಯವಾದ ಮಾದರಿ ಎಂದು ಪ್ರಚಾರ ಪಡಿಸಿದಂತಾಗಿದೆ. ಸಹಜವಾಗಿಯೇ ಇತರರು ಮುಂದುವರಿಯಬೇಕಾದರೆ ಈ ದಾರಿಯನ್ನೇ ತುಳಿಯಬೇಕೆಂದು ಪರೋಕ್ಷವಾಗಿ ಸೂಚಿಸಿದಂತೆ ಕೂಡ ಆಗುತ್ತದೆ.

ಬಂಡವಾಳದ ವೃದ್ಧಿಯನ್ನು ಅಭಿವೃದ್ಧಿಯೆಂದು ವ್ಯಾಖ್ಯಾನಿಸಿದೊಡನೆ ಪ್ರಪಂಚದ ಎಲ್ಲಾ ದೇಶಗಳು ಈ ಮಾದರಿಯನ್ನು ಅನುಸರಿಸಲು ಆರಂಭಿಸಲಿಲ್ಲ. ಯಾಕೆಂದರೆ ಇದೇ ಸಂದರ್ಭದಲ್ಲಿ ಮುಕ್ತ ಮಾರುಕಟ್ಟೆಯ ಮಾದರಿಗೆ ಭಿನ್ನವಾದ ಮತ್ತು ಪಶ್ಚಿಮೇತರವಾದ ಅಭಿವೃದ್ಧಿಯ ಮಾದರಿಯೊಂದು ರಷ್ಯಾದಲ್ಲಿ ಕಾರ್ಯರೂಪದಲ್ಲಿತ್ತು. ಸರಕಾರ ನಿಯಂತ್ರಿತ ಈ ಪಶ್ಚಿಮೇತರ ಮಾದರಿಯು ಅಂದಿನ ಜಾಗತಿಕ ಸಂದರ್ಭದಲ್ಲಿ ಆಗ ತಾನೆ ಸ್ವತಂತ್ರ ಗೊಳ್ಳುತ್ತಿದ್ದ ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಆಕರ್ಷಕವಾಗಿತ್ತು. ಅದಕ್ಕೆ ಮುಖ್ಯ ಕಾರಣಗಳು ಎರಡು:

೧. ಮುಕ್ತ ಮಾರುಕಟ್ಟೆಯ ಮಾದರಿಯನ್ನು ಪ್ರತಿಪಾದಿಸುತ್ತಿದ್ದ ಯುರೋಪಿನ ರಾಷ್ಟ್ರಗಳು ಎರಡು ಮಹಾಯುದ್ಧಗಳಲ್ಲಿ ಪಾಲ್ಗೊಂಡು ಜರ್ಜರಿತವಾಗಿದ್ದವು. ಅವುಗಳಲ್ಲಿನ ಕುಟುಂಬ ವ್ಯವಸ್ಥೆ ಕುಸಿದು ಬಿದ್ದಿತು. ನಿರುದ್ಯೋಗ, ಬಂಡವಾಳದ ಕೊರತೆ, ಉತ್ಪಾದನೆ ಕುಸಿತ ಇವೆ ಮುಂತಾದ ಸಮಸ್ಯೆಗಳಿಂದ ಆ ದೇಶಗಳು ಪುನಃ ಆರ್ಥಿಕವಾಗಿ ಎದ್ದುನಿಲ್ಲಬಲ್ಲವೋ ಎಂದು ಸಂದೇಹಪಡುವ ಸ್ಥಿತಿಯಲ್ಲಿದ್ದುವು. ಅವುಗಳು ಇತರರಿಗೆ ಮಾದರಿಯಾಗುವ ಸಾಧ್ಯತೆ ಇರಲಿಲ್ಲ.

೨. ರಷ್ಯಾದ ಯೋಜಿತ ಅಭಿವೃದ್ಧಿ ಮಾದರಿ ಇದಕ್ಕೆ ಭಿನ್ನವಾಗಿ ಪ್ರಗತಿಯ ಸಂಕೇತವನ್ನು ನೀಡುತ್ತಿತ್ತು. ಈ ಯೋಜಿತ ಅಭಿವೃದ್ಧಿಯ ಹಿಂದೆ ಬಹುದೊಡ್ಡ ಸಂಖ್ಯೆಯ ನರಬಲಿ ಇತ್ತು, ಅವರ ಸಾಮೂಹಿಕ ಕೃಷಿಯ ಹಿಂದೆ ಬಲತ್ಕಾರವಿತ್ತು. ಆದಾಗ್ಯೂ ೧೯೨೩ ಮತ್ತು ೧೯೪೦ರ ನಡುವೆ ಅದು ಬಲಿಷ್ಟವಾದ ಕೈಗಾರಿಕಾ ವ್ಯವಸ್ಥೆಯನ್ನು ನಿರ್ಮಾಣ ಮಾಡಿತ್ತೆಂದು ಏರಿಕ್ ಹಾಬ್ಸಾವಾಮ್ ಅಭಿಪ್ರಾಯಪಡುತ್ತಾನೆ. ಈತನ ಪ್ರಕಾರ ಗಣನೀಯ ಪ್ರಮಾಣದ ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆ ಸಾಧ್ಯವಾದದ್ದು ಕೂಡ ಈ ಯೋಜಿತ ಅಭಿವೃದ್ಧಿಯಿಂದಲೇ. ಈ ಕಾರಣಕ್ಕಾಗಿಯೆ, ಇದು ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಆಕರ್ಷಕವಾಗಿತ್ತು.

ಅಮೆರಿಕವು ಅಂತಾರಾಷ್ಟ್ರೀಯ ಆರ್ಥಿಕ ಕ್ಷೇತ್ರದಲ್ಲಿ ತನ್ನ ಯಜಮಾನಿಕೆಯನ್ನು ಸ್ಥಾಪಿಸಲು ಪ್ರಯತ್ನಿಸಿದರೂ ರಾಜಕೀಯವಾಗಿ ತನ್ನ ಮುಕ್ತಮಾರುಕಟ್ಟೆಯನ್ನು ಆಧರಿಸಿದ ಅಭಿವೃದ್ಧಿಯ ಮಾದರಿಯನ್ನು ಆಗ ತಾನೆ ಸ್ವತಂತ್ರಗೊಂಡ ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ಹೇರುವ

ಸ್ಥಿತಿಯಲ್ಲಿ ಇರಲಿಲ್ಲ. ಆ ಸಂದರ್ಭದಲ್ಲಿ ಅಮೇರಿಕಕ್ಕೆ ತುಂಬ ಸಹಕಾರಿಗಳಾದ ಅಂಶವೆಂದರೆ ಬ್ರೆಟನ್ ವೂಡ್ಸ್ ಸಂಸ್ಥೆಗಳು. ಇವುಗಳ ಅಡಿಯಲ್ಲಿ ಅಸ್ತಿತ್ವಕ್ಕೆ ಬಂದ ಮುಖ್ಯ ಸಂಸ್ಥೆಗಳೆಂದರೆ ಐ.ಎಂ.ಎಫ್., ವಿಶ್ವಬ್ಯಾಂಕ್ ಮತ್ತು ಗ್ಯಾಟ್. ಅಂತರಾಷ್ಟ್ರೀಯ ಸಹಕಾರ, ವ್ಯಾಪಾರ ಅಭಿವೃದ್ಧಿ ಮತ್ತು ವಿನಿಮಯ ದರದ ನಿಯಂತ್ರಣ ಐ.ಎಂ.ಎಫ್.ನ ಉದ್ದೇಶಗಳಾದರೆ; ವಿಶ್ವಬ್ಯಾಂಕ್ ಹಿಂದುಳಿದ ದೇಶಗಳ ಅಭಿವೃದ್ಧಿಗಾಗಿ ಯೋಜನೆಗಳನ್ನು ರೂಪಿಸುವುದು, ಅವುಗಳನ್ನು ಅನುಷ್ಠಾನಕ್ಕೆ ತರುವುದು, ಮತ್ತು ಅಭಿವೃದ್ಧಿಗಾಗಿ ಸಾಲ ನೀಡುವುದು ಮುಂತಾದವುಗಳನ್ನು ತಮ್ಮ ಮುಖ್ಯ ಆಶಯವೆಂದು ಹೇಳಿಕೊಂಡಿವೆ.

ಈ ಸಂಸ್ಥೆಗಳ ಮೂಲಕ ಅಮೇರಿಕ ಹೇಗೆ ತೃತೀಯ ಜಗತ್ತಿನ ರಾಷ್ಟ್ರಗಳ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮೂಗು ತೂರಿಸಲು ಸಾಧ್ಯವಾಯಿತು ಎನ್ನುವುದನ್ನು ನೋಡೋಣ. ಯಶವಂತ್ ಡೋಂಗ್ರೆಯವರ ಪ್ರಕಾರ ಯುದ್ಧದಿಂದ ವಶಪಡಿಸಿಕೊಳ್ಳಲಾಗದ ಮಾರುಕಟ್ಟೆಯನ್ನು ಹೊಸ ಸಂಬಂಧಗಳು ಹೊಸ ಅವಲಂಬನಾ ನೀತಿಗಳು ಮತ್ತು ಹೊಸ ಬಗೆಯ ಅಭಿವೃದ್ಧಿ ಯೋಜನೆಗಳ ಮೂಲಕ ಸಾಧಿಸಲು ಅಮೇರಿಕಾ ದೇಶವು ಬ್ರಿಟನ್‌ನೊಂದಿಗೆ ಸೇರಿ ಹೂಡಿರುವ ಹುನ್ನಾರವೇ ಇಂದಿನ ಅಂತಾರಾಷ್ಟ್ರೀಯ ಹಣಕಾಸು ವ್ಯವಸ್ಥೆ. ಜಗತ್ತಿನ ಬಹುತೇಕ ರಾಷ್ಟ್ರಗಳನ್ನೊಳಗೊಂಡ ಈ ವ್ಯವಸ್ಥೆಗಳಿಂದಾಗಿ ತಮ್ಮ ಮಾರುಕಟ್ಟೆಯನ್ನು ವಿಸ್ತರಿಸಿಕೊಳ್ಳುವಲ್ಲಿ ಅಮೇರಿಕಾ ಮತ್ತು ಅದರ ಸಹರಾಷ್ಟ್ರಗಳು ಪೂರ್ಣ ಯಶಸ್ವಿಯಾಗಿವೆ. ಹೆಚ್ಚಿನ ಬಡರಾಷ್ಟ್ರಗಳಲ್ಲಿ ಆರ್ಥಿಕ ನೀತಿಗಳಿಗೆ ಸಂಬಂಧಪಟ್ಟ ನಿರ್ಧಾರಗಳನ್ನು ಕೈಗೊಳ್ಳುವವರು ಬಲ್ಲಿದ ಅಲ್ಪಸಂಖ್ಯಾಕ ವರ್ಗವಾಗಿರುತ್ತದೆ. ಇವರ ಪಾಲಿಗೆ ಅಭಿವೃದ್ಧಿ ಹೊಂದುವುದೆಂದರೆ ಅಮೇರಿಕಾ ಅಥವಾ ಇನ್ನಾವುದೋ ಪಶ್ಚಿಮದ ದೇಶಗಳು ಹೊಂದಿರುವ ತಂತ್ರಜ್ಞಾನವನ್ನು ತಾವು ಹೊಂದುವುದು ಮತ್ತು ಅವರ ಸರಕು ಮತ್ತು ಸೇವೆಗಳ ಅನುಭೋಗದ ಮಟ್ಟವನ್ನು ತಾವು ತಲುಪುವುದು ಎಂದಾಗಿರುವುದರಿಂದಲೇ ಬಲಿಷ್ಟ ದೇಶಗಳ ಅಭಿವೃದ್ಧಿ ರಾಜಕೀಯ ಅಂತಾರಾಷ್ಟ್ರೀಯ ಹಣಕಾಸು ವ್ಯವಸ್ಥೆಯಲ್ಲಿ ಶಾಸನ ಬದ್ಧಗೊಂಡು ಸುಲಲಿತವಾಗಿ ನಡೆದಿದೆ. ಈ ರಾಜಕೀಯದ ಸರಳೀಕೃತ ರೂಪ ಹೀಗಿದೆ: ಅಭಿವೃದ್ಧಿಯೆಂದರೆ ಬಂಡವಾಳದ ವೃದ್ಧಿಯೆಂದು ಮೊದಲು ತೀರ್ಮಾನಿಸಲಾಗುತ್ತದೆ. ಈ ವ್ಯಾಖ್ಯಾನಕ್ಕೆ ಅನುಗುಣವಾಗಿ ಅಭಿವೃದ್ಧಿಯ ಕೆಲವು ಪ್ರಮಾಣಗಳನ್ನು ಮತ್ತು ಸೂಚ್ಯಾಂಶಗಳನ್ನು ಗುರುತಿಸಲಾಗುತ್ತದೆ. ಆನಂತರ ಅದನ್ನು ಹಿಂದುಳಿದ ವ್ಯವಸ್ಥೆಯೊಂದಿಗೆ ಹೋಲಿಸಿ ಎಷ್ಟರ ಮಟ್ಟಿಗೆ ಅದು ಹಿಂದುಳಿದಿದೆ ಮತ್ತು ಆ ಸ್ಥಿತಿಯಿಂದ ಮುಂದುವರಿಯಬೇಕಾದರೆ ಯಾವ ಆರ್ಥಿಕ ನೀತಿಯನ್ನು ಅನುಸರಿಸಬೇಕಾಗುತ್ತದೆ ಎಂದು ಸಲಹೆ ನೀಡಲಾಗುವುದು. ಆಗ ಬಡದೇಶಗಳು ಇಂತಹ ಅಭಿವೃದ್ಧಿಗೆ ಅಗತ್ಯವಾದ ಬಂಡವಾಳ, ತಂತ್ರಜ್ಞಾನ ಮತ್ತು ತಾಂತ್ರಿಕ ಪರಿಕರಗಳ ಕೊರತೆಯನ್ನು ಹೇಳಿಕೊಳ್ಳುತ್ತವೆ. ಆ ಸಂದರ್ಭದಲ್ಲಿ ಅಂತಾರಾಷ್ಟ್ರೀಯ ಸಂಸ್ಥೆಗಳು ಸಹಾಯಧನ ಮತ್ತು ಸಾಲಗಳ ಮೂಲಕ ಪರಿಹಾರ ನೀಡುತ್ತವೆ. ಈ ಕ್ರಮದಲ್ಲಿ ಅಂತಾರಾಷ್ಟ್ರೀಯ ಆರ್ಥಿಕ ಹಾಗೂ ರಾಜಕೀಯ ಶಕ್ತಿಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಆಂತರಿಕ ನಿರ್ಧಾರಗಳ ಮೇಲೆ ಖಚಿತವಾದ ಪ್ರಭಾವವನ್ನು ಬೀರುತ್ತವೆ.

ಅಭಿವೃದ್ಧಿಯ ವ್ಯಾಖ್ಯಾನದಲ್ಲಿ ಆಧುನಿಕ ವ್ಯವಸ್ಥೆಯ ಉತ್ಪಾದನಾ ಸಾಮರ್ಥ್ಯದ ಬಗ್ಗೆ ಧಾರಾಳ ವಿವರಣೆ ಉಂಟು. ಆದರೆ, ಈ ಉತ್ಪಾದನಾ ಸಾಮರ್ಥ್ಯವನ್ನು ಗಳಿಸಿಕೊಳ್ಳುವಾಗ ಆಯಾ ರಾಷ್ಟ್ರಗಳು ಮಾಡಿದ ಪರಿಸರ ನಾಶದ ಬಗ್ಗೆ ಹೆಚ್ಚಿನ ಮಾಹಿತಿ ನಮಗೆ ದೊರಕಿಲ್ಲ. ಈ ಅಂಶವನ್ನು ಸ್ವಲ್ಪ ವಿಸ್ತಾರವಾಗಿಯೇ ನೋಡಬೇಕಿದೆ. ಕೈಗಾರಿಕೀಕರಣವು ಹೇಗೆ ಪಶ್ಚಿಮ ಯುರೋಪಿನ ಸಮಾಜದಲ್ಲಿ ಮೂಲಭೂತ ಪರಿವರ್ತನೆಯನ್ನು ತಂದಿತು ಎನ್ನುವುದನ್ನು ಈಗಾಗಲೇ ನೋಡಿದ್ದೇವೆ. ಅನೇಕ ಸಮಾಜಶಾಸ್ತ್ರಜ್ಞರು ಈ ಬೆಳವಣಿಗೆಯಿಂದ ಪ್ರಭಾವಿತಗೊಂಡಿದ್ದಾರೆ. ಅವರ ಪ್ರಕಾರ, ಹಲವಾರು ತಾಂತ್ರಿಕ ಆವಿಷ್ಕಾರಗಳು ಮೊದಲು ಉತ್ಪಾದನಾ ಕ್ರಮದಲ್ಲಿ ಅನಂತರ ಉತ್ಪಾದನಾ ಸಂಬಂಧಗಳಲ್ಲಿ ಬದಲಾವಣೆ ತಂದವು. ಆದುದರಿಂದ ಇದೇ ಉತ್ಪಾದನಾ ಕ್ರಮವನ್ನು ಹಿಂದುಳಿದ ಆರ್ಥಿಕತೆಯೊಂದರಲ್ಲಿ ಅಳವಡಿಸುವ ಮೂಲಕ ಆ ಆರ್ಥಿಕತೆಯ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆ ಸಾಧ್ಯ ಎನ್ನುವ ತೀರ್ಮಾನಕ್ಕೆ ಅವರು ಬರುತ್ತಾರೆ. ಅದೇ ರೀತಿಯಲ್ಲಿ ಬಂಡವಾಳಶಾಹಿ ಉತ್ಪಾದನಾ ಕ್ರಮವನ್ನು ಅದರ ಹಿಂದಿನ ಉಳಿಗಮಾನ್ಯ ಉತ್ಪಾದನಾ ಕ್ರಮದೊಂದಿಗೆ ಹೋಲಿಸಿ ಬಂಡವಾಳಶಾಹಿಯನ್ನು `ಮುಂದುವರಿದ' ಅಥವಾ `ಆಧುನಿಕ' ಎಂದು ವರ್ಗೀಕರಿಸಲಾಯಿತು ಎಂದೂ ನೋಡಿದ್ದೇವೆ. ಹೀಗೆ ಬಂಡವಾಳಪೂರ್ವ ವ್ಯವಸ್ಥೆಗಳನ್ನು ಹಿಂದುಳಿದ ಮತ್ತು ಆ ವ್ಯವಸ್ಥೆಯಿಂದ ಆದಷ್ಟು ಬೇಗ ಕಳಚಿಕೊಂಡು ಬಂಡವಾಳಶಾಹೀ ಉತ್ಪಾದನಾ ಕ್ರಮವನ್ನು ಹಮ್ಮಿಕೊಳ್ಳುವುದೇ ಅಭಿವೃದ್ಧಿಯೆಂದು ವ್ಯಾಖ್ಯಾನಿಸಲಾಗಿದೆ. ಈ ಸರಳೀಕೃತ ವ್ಯಾಖ್ಯಾನವೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬೇರೆಯೇ ರೂಪ ಪಡೆಯುತ್ತಿದೆ. ಅವರ ಯೋಜನೆಗಳ ಒಟ್ಟು ಉದ್ದೇಶವೆಂದರೆ ಶ್ರೀಮಂತ ರಾಷ್ಟ್ರಗಳು ಸಾಧಿಸಿದ ಸರಕು ಮತ್ತು ಸೇವೆಗಳ ಅನುಭೋಗದ ಮಟ್ಟವನ್ನು ತಲುಪುವುದೇ ಆಗಿದೆ. ಅದನ್ನು `ಅಭಿವೃದ್ಧಿ' ಎಂದು ಗ್ರಹಿಸಲಾಗಿದೆ. ಈ ಬಗೆಯ ಅಭಿವೃದ್ಧಿಯ ಮಾದರಿಯನ್ನು ಸ್ವಾತಂತ್ರ್ಯಾನಂತರ ನಾವು ನಮ್ಮ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದೇವೆ. ಪಂಡಿತ್ ಜವಹರಲಾಲ್ ನೆಹರುರವರ ನೇತೃತ್ವದಲ್ಲಿ ಕಳೆದ ಹಲವು ದಶಕಗಳಿಂದ ನಿರ್ವಹಿಸಿಕೊಂಡು ಬಂದ ನಮ್ಮ ಔದ್ಯಮೀಕರಣ ಹಾಗೂ ಆಧುನೀಕರಣಗಳ ಹಿಂದೆ ಈ ಬಗೆಯ ಸರಳರೇಖಾತ್ಮಕ ಅಭಿವೃದ್ಧಿಯ ಕೆಲಸ ಮಾಡಿದೆ. ಅಭಿವೃದ್ಧಿಯ ಈ ಕಲ್ಪನೆಯೊಳಗೆ ಪರಿಸರ ನಾಶದ ವಿವರಣೆ ಇರುವುದಿಲ್ಲ. ಪಶ್ಚಿಮದ ಮಾದರಿಯ ಅಭಿವೃದ್ಧಿಯು ಪರಿಸರ ನಾಶವನ್ನು ಒಳಗೊಂಡ ಬಗೆ ತಿಳಿಯಬೇಕಾದರೆ ಅವರ ಅಭಿವೃದ್ಧಿಯ ಚರಿತ್ರೆಯ ಕಿರು ಪರಿಚಯವಾದರೂ ನಮಗೆ ಬೇಕಾಗುತ್ತದೆ.

ಪಶ್ಚಿಮದ ಉತ್ಪಾದನಾ ಸಾಮರ್ಥ್ಯದ ಹೆಚ್ಚಳದ ಹಿಂದೆ `ಪ್ರಕೃತಿ ಮತ್ತು ಮಾನವ' ಸಂಬಂಧಗಳ ವಿಚಾರದಲ್ಲಿ ಆದ ಪರಿವರ್ತನೆಯ ಪಾತ್ರ ಮಹತ್ತರವಾದುದು. ಈ ಬದಲಾದ ವೈಚಾರಿಕತೆಯ ಪ್ರಕಾರ ಆಧುನಿಕ ಮಾನವ ತನ್ನನ್ನು ಪ್ರಕೃತಿಯ ಒಂದು ಅಂಶವೆಂದು ತಿಳಿಯದೆ ಪ್ರಕೃತಿಯಿಂದ ಹೊರಗಿರುವ ಶಕ್ತಿ ತಾನೆಂದು ತಿಳಿಯಲು ಆರಂಭಿಸಿದ. `ಪ್ರಕೃತಿಯ ಮೇಲಿನ ಪ್ರಭುತ್ವ', `ಪ್ರಕೃತಿಯ ಶಕ್ತಿಗಳನ್ನು ಮಣಿಸುವುದು' ಮುಂತಾದ ನುಡಿಗಟ್ಟುಗಳು ಪ್ರಧಾನ ವಿಚಾರಧಾರೆಯ ಮೂರ್ತ ರೂಪಗಳಾದುವು. ಅವು ಬೇಕನನ `ನ್ಯೂ ಅಟ್ಲಾಂಟಿಸ್,' ಕೃತಿಯಷ್ಟು

ಹಳೆಯವಾದರೂ ಈಗಲೂ ಚಾಲ್ತಿಯಲ್ಲಿವೆ. ಹತ್ತೊಂಭತ್ತನೆಯ ದ್ವಿತೀಯಾರ್ಧದಲ್ಲಂತೂ ಸ್ವಯಂತಂತ್ರವಾದಿ ಬುದ್ಧಿಜೀವಿಗಳ ಕೃತಿಗಳಲ್ಲಿ ಮಾತ್ರವಲ್ಲ; ಸಮಾಜವಾದಿ ಮತ್ತು ಮಾರ್ಕ್ಸವಾದಿ ಬರಹಗಳಲ್ಲೂ ಕೂಡ ಈ `ಪ್ರಕೃತಿಯ ಮೇಲೆ ಪ್ರಭುತ್ವ', `ನಿಸರ್ಗವನ್ನು ಮಣಿಸುವುದು,' ಮುಂತಾದ ನುಡಿಗಟ್ಟುಗಳು ಧಾರಳವಾಗಿ ಬಳಕೆಯಾಗಿವೆ. ಈ ಬಗೆಯ ವಿಚಾರವು ಪಶ್ಚಿಮದಲ್ಲಿ ಜನಪ್ರಿಯವಾಗಲು ಬಲವಾದ ಕಾರಣವಿತ್ತು. ಆಧುನಿಕ ಸಮಾಜದ ಜ್ವಲಂತ ಸಮಸ್ಯೆ ಬಡತನವಷ್ಟೆ. ಉತ್ಪಾದನೆ ಮತ್ತು ಹೆಚ್ಚು ಹೆಚ್ಚು ಉತ್ಪಾದನೆ ಮಾತ್ರ ಈ ಸಮಸ್ಯೆಗೆ ಸರಿಯಾದ ಪರಿಹಾರ ಎಂದು ತಮ್ಮ ತಮ್ಮ ತಾತ್ವಿಕ ಭಿನ್ನತೆಗಳನ್ನು ಬದಿಗಿಟ್ಟು ಪ್ರತಿಯೊಬ್ಬರು ಪ್ರತಿಪಾದಿಸತೊಡಗಿದ್ದರು. ಈ ಉತ್ಪಾದನಾ ಹೆಚ್ಚಳವು ನಮ್ಮನ್ನು ಆವರಿಸಿರುವ ನೈಸರ್ಗಿಕ ಪರಿಸರದಲ್ಲಿ ವಿಪರೀತ ಏರುಪೇರು ಮತ್ತು ಹಾನಿಯನ್ನು ತರಬಹುದು ಎನ್ನುವುದೂ ನಿಜ. ಆದರು, ಸಮಾಜ ಎದುರಿಸುತ್ತಿರುವ ಬಡತನದ ಅಗಾಧ ಸಮಸ್ಯೆಯ ಎದುರು ಪರಿಸರದ ಪ್ರಶ್ನೆ ಗೌಣ ಎಂದು ತಿಳಿಯಲಾಯಿತು. ಬಡತನವನ್ನು ಹೋಗಲಾಡಿಸಲು ಹೆಚ್ಚಿನ ಸಂಪತ್ತಿನ ಉತ್ಪಾದನೆ ಅನಿವಾರ್ಯ. ಪ್ರಕೃತಿಯನ್ನು ಮನುಷ್ಯನ ಅನುಕೂಲಕ್ಕೆ ತಕ್ಕಂತೆ ಪಳಗಿಸಲು ಆಧುನಿಕ ವೈಜ್ಞಾನಿಕ ಉತ್ಪಾದನೆಯೇ ಏಕಮಾತ್ರ ಮಾರ್ಗವೆಂಬ ಧೋರಣೆ ಹೆಚ್ಚು ಹೆಚ್ಚು ಪ್ರಚಲಿತವಾಯಿತು.

ಈ ರೀತಿಯ ಬೆಳವಣಿಗೆಯಿಂದಾಗಿ ಪ್ರಕೃತಿಯಲ್ಲಿ ಮನುಷ್ಯನ ಹಸ್ತಕ್ಷೇಪದ ಪರಿಣಾಮಗಳು ಕೈಗಾರಿಕಾ ಕ್ರಾಂತಿಯಿಂದ ಕಣ್ಣಿಗೆ ಕುಕ್ಕುವ ಹಾಗೆ ಎದ್ದು ಕಂಡವು. ಭಾರಿ ಗಣಿಕೈಗಾರಿಕೆಗಳು, ಕಬ್ಬಿಣ, ಉಕ್ಕು, ರಾಸಾಯನಿಕ ಉದ್ಯಮಗಳ ಬೆಳವಣಿಗೆ, ಫ್ಯಾಕ್ಟರಿಗಳಲ್ಲಿ ಉತ್ಪಾದನೆಯ ಕೇಂದ್ರೀಕರಣ, ಯಾವುದೇ ಯೋಜನೆಯಿಲ್ಲದೆ ಯದ್ವಾ ತದ್ವಾ ತಲೆಯೆತ್ತಿದ ನಗರಗಳಿಂದ ಹುಟ್ಟಿಕೊಂಡು ಹೊಸ ಸಮಸ್ಯೆಗಳಾದ ಮನುಷ್ಯ ವಸತಿಯ ತೀವ್ರ ಕೊರತೆ ಮತ್ತು ಪರಿಸರ ಮಾಲಿನ್ಯ. ಈ ಎಲ್ಲದರ ಪರಿಣಾಮಗಳು ಅಸಾಧಾರಣವೆನ್ನುವಷ್ಟು ತೀವ್ರವಾಗಿದ್ದವು ಎಂಬುದಂತೂ ನಿಜ. ಜಗತ್ತಿನಲ್ಲಿ ಎಲ್ಲೆಲ್ಲಿ ಖನಿಜಗಳು ದೊರೆಯುತ್ತವೆಯೋ ಅಲ್ಲೆಲ್ಲ ಭೂಪ್ರದೇಶದ ಸ್ವರೂಪವೇ ಬದಲಾಗಿ ಬಿಟ್ಟಿತ್ತು. ಇದರಿಂದ ನಿಸರ್ಗದ ಸಹಜ ನಿರಾಳ ಸ್ಥಿತಿ ಮನುಷ್ಯನ ಎಗ್ಗಿಲ್ಲದ ಹಸ್ತಕ್ಷೇಪದಿಂದಾಗಿ ಕುಲಗೆಡುತ್ತಿದೆ ಎಂಬ ಕೂಗೆದ್ದಿತು. ಕೈಗಾರಿಕಾ ಕ್ರಾಂತಿಯ ದುಷ್ಪರಿಣಾಮಗಳನ್ನು ವಿರೋಧಿಸುವ ಧೋರಣೆ ಇಂಗ್ಲೇಂಡಿನಲ್ಲಿ ಆ ಕ್ರಾಂತಿಯ ಮೊದಲ ದಿನಗಳಲ್ಲೇ ಕಾಣಿಸಿಕೊಂಡವು. ಅದಕ್ಕೆ ಕಾರಣ ಸ್ಪಷ್ಟವಾಗಿದೆ. ಅತ್ಯಂತ ತೀವ್ರಗತಿಯ ಔದ್ಯಮೀಕರಣ ಆ ಕಾಲದಲ್ಲಿ ನಡೆದದು ಕೂಡ ಇಂಗ್ಲೆಂಡಿನಲ್ಲಿ. ಹೇಮಂಡ್ಸನ ದಿ ರೈಸ್ ಆಫ್ ಮಾಡರ್ನ್ ಇಂಡಸ್ಟ್ರೀಸ್, ಬರ್ಟ್ರಾಂಡ್ ರಸೆಲ್‌ನ ದಿ ಇಂಪಾಕ್ಟ್ ಆಫ್ ಸಾಯನ್ಸ್ ಆನ್ ಸೊಸೈಟಿ ಮುಂತಾದ ಕೃತಿಗಳು ಔದ್ಯಮೀಕರಣದ ದುಷ್ಪರಿಣಾಮಗಳನ್ನು ಎತ್ತಿ ತೋರಿಸಿವೆ. ಔದ್ಯಮೀಕರಣವು ಅಮೇರಿಕದಲ್ಲಿ ಬ್ರಿಟನ್‌ನ ನಂತರ ಪ್ರಾರಂಭವಾಯಿತು. ಅಲ್ಲಿಯೂ ಪ್ರಾರಂಭದಲ್ಲಿ ಇದೇ ರೀತಿಯ ಪ್ರತಿಕ್ರಿಯೆ ಕಂಡುಬಂದಿತ್ತು.

ಪಶ್ಚಿಮದ ಮಾದರಿಯ ಅಭಿವೃದ್ಧಿಯ ಪರಿಕಲ್ಪನೆಯಲ್ಲಿ ಪರಿಸರ ನಾಶ ಒಂದು ಭಾಗವಾಗಿಯೇ ಇದೆ. ಆದುದರಿಂದ ಪರಿಸರ ನಾಶವಿಲ್ಲದ ಅಭಿವೃದ್ಧಿ ಕಾರ್ಯಕ್ರಮಗಳಿಗೆ

ಯಾಕೆ ಒತ್ತು ಕೊಡಬಾರದೆಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ಪಶ್ಚಿಮದ ಅಭಿವೃದ್ಧಿ ಮಾದರಿಗಳನ್ನು ಅನಿವಾರ್ಯಗೊಳಿಸುವ ಅಂತಾರಾಷ್ಟ್ರೀಯ ರಾಜಕೀಯ ಮತ್ತು ಆರ್ಥಿಕ ಸಂದರ್ಭಗಳನ್ನು ಹಿಂದೆ ನೋಡಿದ್ದೇವೆ. ಈ ಸಂದರ್ಭವು ನಮ್ಮ ಆಂತರಿಕ ನಿರ್ಧಾರಗಳನ್ನು ಖಂಡಿತ ಪ್ರಭಾವಿಸಿವೆ. ಇದರೊಂದಿಗೆ ಆಂತರಿಕ ರಾಜಕೀಯ, ಆರ್ಥಿಕ ಸಂಬಂಧಗಳು ಕೂಡ ಮುಖ್ಯವಾಗಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯ ರಾಜಕಾರಣದ ಮುಂದಾಳುಗಳಲ್ಲಿ ಹೆಚ್ಚಿನವರು ಪಶ್ಚಿಮದ ರಾಜಕೀಯ ಶಕ್ತಿಯ ಹಿಂದಿನ ಕೇಂದ್ರ ಬಲವೆಂದರೆ ಉದ್ಯಮೀಕರಣ ಒಂದೇ ಎಂದು ನಂಬಿದ್ದರು. ಉದ್ಯಮೀಕರಣದ ಮುನ್ನಡೆಯೇ ಪಶ್ಚಿಮದ ಸಮಾಜಗಳಿಗೆ ಆರ್ಥಿಕ ಬಲವನ್ನೂ, ರಾಜಕೀಯ ಶಕ್ತಿಯನ್ನೂ ನೀಡುತ್ತವೆ ಎಂದವರು ಭಾವಿಸಿದ್ದರು. ಎರಡನೆಯದಾಗಿ, ಅಂದು ಪ್ರಬಲ ಪಕ್ಷವಾಗಿದ್ದ ಕಾಂಗ್ರೆಸ್ಸಿನ ಅಧಿಕಾರ ಸ್ಥಾನದಲ್ಲಿ ಉಳಿಗಮಾನ್ಯ ವ್ಯವಸ್ಥೆಯ ಭೂಮಾಲೀಕರು ಸಾಕಷ್ಟು ಸಂಖ್ಯೆಯಲ್ಲಿದ್ದರು. ಅವರು ಭೂಸುಧಾರಣೆಯನ್ನು ತಂದು ಸಾಮಾಜಿಕ ಹಾಗು ಆರ್ಥಿಕ ಪರಿವರ್ತನೆಗೆ ಕಾರಣವಾಗುವ ಸಾಧ್ಯತೆಯಿರಲಿಲ್ಲ. ಈ ಕಾರಣದಿಂದ ಪಶ್ಚಿಮದ ತಂತ್ರಜ್ಞಾನ ಆಧಾರಿತ ಔದ್ಯಮೀಕರಣವೇ ನಮ್ಮ ಎಲ್ಲಾ ಸಮಸ್ಯೆಗಳಿಗೆ ಪರಿಹಾರವಾದೀತು; ಆರ್ಥಿಕ ಪ್ರಗತಿಯೊಂದಿಗೆ ಸಮಾಜಿಕ ಪರಿವರ್ತನೆ ಕೂಡ ಸಾಧ್ಯ ಎನ್ನುವ ನಿಲುವು ಬಲಗೊಂಡಿತು.

ಪಶ್ಚಿಮದ ಅಭಿವೃದ್ಧಿ ಮಾದರಿಯನ್ನೆ ನಾವು ಯಾಕೆ ಪಡೆದುಕೊಂಡೆವು? ಇದರಲ್ಲಿ ನಮ್ಮ ಆಯ್ಕೆ ಪ್ರಶ್ನೆ ಯಾಕೆ ಇರಲಿಲ್ಲ? ಎಂದರೆ: ಮೇಲಿನ ಎರಡು ಉತ್ತರಗಳನ್ನು ಕೊಡಬಹುದು. ಇನ್ನೂ ಒಂದು ಕುತೂಹಲದ ಸಂಗತಿ ಇದೆ. ಇಂದು ಪ್ರಪಂಚದ ಯಾವುದೇ ದೇಶ ಕೂಡಾ ತನ್ನದೇ ಆದ ಬಂಡವಾಳಶಾಹಿಯ ಜಾಗತೀಕ ವ್ಯವಸ್ಥೆಗೆ ಪೂರಕವಲ್ಲದ ಉತ್ಪಾದನಾ ತಂತ್ರ ಮತ್ತು ಆರ್ಥಿಕ ನೀತಿಯನ್ನು ಹೊಂದಿದ ದಾಖಲೆಗಳಿಲ್ಲ. ಈ ಶತಮಾನದ ಆರಂಭದಲ್ಲಿ ಎಡಪಂಥೀಯ ದೇಶಗಳಲ್ಲಿ ಈ ನಿಟ್ಟಿನಲ್ಲಿ ಸ್ವಲ್ಪ ಮಟ್ಟಿನ ಪ್ರಯತ್ನಗಳು ನಡೆದಿದ್ದುವು. ಆದರೆ, ಅಲ್ಲಿ ಕೂಡಾ ಉತ್ಪಾದನಾ ತಂತ್ರದ ವಿಚಾರದಲ್ಲಿ ಮಹತ್ವದ ಬದಲಾವಣೆಗಳು ಇರಲಿಲ್ಲ. ಆದರೆ ಈ ಅಲ್ಪ ಪ್ರಮಾಣದ ಪ್ರಯತ್ನ ಕೂಡ ದುಃಸಾಧ್ಯ ಎಂದು ಹಲವಾರು ಎಡಪಂಥೀಯ ದೇಶಗಳಲ್ಲಿನ ಪ್ರಸಕ್ತ ಬದಲಾವಣೆಗಳಿಂದ ತಿಳಿದು ಬರುತ್ತದೆ. ನಮ್ಮಲ್ಲಂತೂ ಆರಂಭದಿಂದಲೂ ಸಮಾಜವಾದೀ ಸಮಾಜನಿರ್ಮಾಣದ ಘೋಷಣೆಯಡಿಯಲ್ಲಿ ಅತಿ ಹೆಚ್ಚಿನ ಉತ್ಪಾದನೆಗೆ ಮಹತ್ವ ಕೊಡುವ ಅಭಿವೃದ್ಧಿಯ ಪರಿಕಲ್ಪನೆಯೇ ಜಾರಿಯಲ್ಲಿತ್ತು. ಐದು ದಶಕಗಳ ಅನಂತರ ಈಗ ನಾವು ಸ್ವಯಂತಂತ್ರವಾದೀ ನೀತಿಗಳತ್ತ ಗಮನ ಹರಿಸುತ್ತಿದ್ದೇವೆ. ಈ ಬದಲಾವಣೆಗೆ ಕಾರಣ ನಮ್ಮಲ್ಲಿ ಆರ್ಥಿಕ ಚಟುವಟಿಕೆಗಳಿಂದ ಗಣನೀಯವಾದ ಪರಿಸರ ನಾಶವಾಗಿದೆ ಎಂದಲ್ಲ. ಬದಲಾಗಿ ಸರಕಾರದ ನೇತೃತ್ವದಲ್ಲಿ ನಡೆಯುತ್ತಿದ್ದ ಔದ್ಯಮೀಕರಣ ತೀವ್ರಗತಿಯಲ್ಲಿ ನಡೆಯಲಿಲ್ಲ ಎಂಬುದು. ಆದುದರಿಂದ ಖಾಸಗೀ ಉದ್ಯಮತ್ವಕ್ಕೆ ಹೆಚ್ಚಿನ ಮಹತ್ವ ಕೊಡಬೇಕೆಂಬ ದೃಷ್ಟಿಯಿಂದಾಗಿದೆ. ಈ ಬದಲಾವಣೆ ಕೂಡ ನಮ್ಮದೇ ಸ್ವಂತ ಅನುಭವ ಅಥವಾ ಅಗತ್ಯಗಳಿಗೆ ಅನುಗುಣವಾಗಿ ನಡೆದಿಲ್ಲ. ಇದು ಜಾಗತಿಕ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯ ಅಂಗ ಸಂಸ್ಥೆಗಳಿಂದಲೂ ಐ.ಎಂ.ಎಫ್. ವಿಶ್ವಬ್ಯಾಂಕ್, ಮುಂತಾದವುಗಳ

ಒತ್ತಡದಿಂದಲೂ ನಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ಅಭಿವೃದ್ಧಿ ವ್ಯಾಖ್ಯಾನವನ್ನು ನಮ್ಮ ಪರಿಸ್ಥಿತಿಗೆ ಅನುಗುಣವಾಗಿ ಮಾರ್ಪಾಟು ಮಾಡಿಕೊಳ್ಳಬೇಕು ಎನ್ನುವ ವಿಚಾರಗಳು ಕೂಡಾ ಅವಾಸ್ತವಿಕವಾಗಿ ಬಿಡುತ್ತವೆ.

## ಪರಿಸರ ಮತ್ತು ಆಧುನೀಕರಣ ಪ್ರಕ್ರಿಯೆ

ಪರಿಸರ ಚಳವಳಿಯ ಸಂದರ್ಭದಲ್ಲಿ ರೂಪುಗೊಂಡ ಕೆಲವೊಂದು ಪ್ರಮುಖ ವಿಚಾರಗಳನ್ನು ವಿಮರ್ಶೆಗಾಗಿ ಇಲ್ಲಿ ಎತ್ತಿಕೊಳ್ಳಲಾಗಿದೆ. ಮುಖ್ಯವಾಗಿ ಅನುಭೋಗ ಶೈಲಿಯ ಬದಲಾವಣೆ ಇಲ್ಲದೆ ಪರಿಸರ ಸಂರಕ್ಷಣೆ ಬಯಸುವುದು; ವರ್ಗ ಭೇದವಿಲ್ಲದೆ ಅನ್ವಯವಾಗುವ ಪರಿಸರವಾದ, ಕೈಗಾರಿಕೀಕರಣಕ್ಕೆ ಮಾತ್ರ ಸೀಮಿತಗೊಳ್ಳುವ ಪರಿಸರ ನಾಶ, ಪರಿಸರವಾದದ ಅಲೆಯನ್ನು ಏರಿ ಬರಲು ಪ್ರಯತ್ನಿಸುವ `ನಮ್ಮ ಸಂಸ್ಕೃತೀಯ' ಕಲ್ಪನೆ ಇವೇ ಮುಂತಾದವುಗಳನ್ನು ಈ ಭಾಗದಲ್ಲಿ ಚರ್ಚಿಸಲಾಗುವುದು. ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅದರಲ್ಲೂ ಭಾರತದಂತಹ ದೇಶಗಳಲ್ಲಿ ಪ್ರಕಟಗೊಳ್ಳುತ್ತಿರುವ ಪರಿಸರ ಸಂಬಂಧಿತ ಚಳವಳಿಯ ಹಿಂದೆ ನಾವು ಅನುಸರಿಸುತ್ತಿರುವ ತಾಂತ್ರಿಕ ಆಧುನೀಕರಣದ ಪಾತ್ರ ತುಂಬಾ ಇದೆ. ಇಲ್ಲಿ ಪಶ್ಚಿಮದ ತಂತ್ರಜ್ಞಾನ ಆಧಾರಿತ ಉತ್ಪಾದನಾ ಕ್ರಮ ಮತ್ತು ನಿಯೊ-ಕ್ಲಾಸಿಕಲ್ ಅರ್ಥಶಾಸ್ತ್ರಜ್ಞರು ಪ್ರತಿಪಾದಿಸುವ ಮಾರುಕಟ್ಟೆ ವ್ಯವಸ್ಥೆ ಸಮಾಜದ ಎಲ್ಲಾ ಸ್ತರಗಳಿಗೆ ಇನ್ನೂ ಹಬ್ಬಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಈ ಆಧುನಿಕ ಅಥವಾ ಮಾರುಕಟ್ಟೆ ವ್ಯವಸ್ಥೆ ಅದರ ಹಿಂದಿನ ಸಾಂಪ್ರದಾಯಿಕ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ವ್ಯವಹರಿಸುತ್ತದೆ. ಆಧುನಿಕ ಉತ್ಪಾದನಾ ತಂತ್ರಗಳ ಅಳವಡಿಸುವಿಕೆಯ ಮೂಲಕ ಆಧುನಿಕತೆಗೆ ಪ್ರಯತ್ನಸಿದ್ದರೂ ಅದು ಸಾಧ್ಯವಾಗದೆ ಪ್ರಸಕ್ತದಲ್ಲಿ, ಮಾರುಕಟ್ಟೆ ವ್ಯವಸ್ಥೆಯೊಳಗೆ ಸೇರಿಸಿಕೊಳ್ಳುವುದೇ ಆಧುನೀಕರಣದ ಪ್ರಥಮ ಹಂತ ಎಂಬ ವಾಖ್ಯಾನಕ್ಕೆ ದಾರಿಯಾಗುತ್ತಿದೆ. ಆದರೆ, ಇಂತಹ ಸಂಕೀರ್ಣ ವ್ಯವಸ್ಥೆಯು ಬಂಡವಾಳಪೂರ್ವ ವ್ಯವಸ್ಥೆಯ ಸಂಪನ್ಮೂಲಗಳನ್ನು ಬಂಡವಾಳದ ವೃದ್ಧಿಗೆ ಬಳಸಿಕೊಳ್ಳಲು ಮಾತ್ರ ನೆರವಾಗುತ್ತಿದೆ. ಈ ಪ್ರಕ್ರಿಯೆಯು ಸ್ವತಂತ್ರ ಪೂರ್ವದಲ್ಲಿ ವಸಾಹತುಶಾಹಿಯ ಹೆಸರಿನಲ್ಲಿ ನಡೆದರೆ, ಈಗ ಅಭಿವೃದ್ಧಿಯ ಹೆಸರಲ್ಲಿ ನಡೆಯುತ್ತಿದೆ. ಈ ಕ್ರಮದ ಬಂಡವಾಳದ ಹಬ್ಬುವಿಕೆ ಸಾಂಪ್ರದಾಯಿಕ ಕಸುಬುಗಾರಿಕೆ, ಸಂಪನ್ಮೂಲಗಳ ಬಳಕೆ, ಗುಡಿ ಕೈಗಾರಿಕೆಗಳನ್ನು, ಸ್ವಾತಂತ್ರ್ಯ ಪೂರ್ವದಲ್ಲೂ ಮತ್ತು ಇಂದಿಗೂ, ನಾಶಗೊಳಿಸುತ್ತಾ ಸಾಗಿದೆ. ಪರದೇಶೀಯರ ಆಳ್ವಿಕೆ ಸಂದರ್ಭದಲ್ಲಿ ಈ ಬಗ್ಗೆ ಅಂದರೆ ನಮ್ಮ ದೇಶಿ ಉತ್ಪಾದನಾ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ಬಗ್ಗೆ ಕಾಳಜಿಯಿದ್ದ ಅಥವಾ ಪ್ರಾಮಾಣಿಕ ಪ್ರಯತ್ನ ಮಾಡಿದ ಬಗ್ಗೆ ಸಾಕಷ್ಟು ಪ್ರಚಾರವಿದೆ. ಸ್ವಾತಂತ್ರ್ಯಾನಂತರ ಕೂಡ ನಮ್ಮ ದೇಶೀ ಉತ್ಪಾದನಾ ಪದ್ಧತಿಗಳು ನಾಶವಾಗುತ್ತಿವೆ. ಆದರೆ ಅದನ್ನು ಒಂದು ದೊಡ್ಡ ಸಮಸ್ಯೆ ಎಂದು ಪರಿಗಣಿಸಲಾಗಿಲ್ಲ. ಇದಕ್ಕೆ ಹಲವಾರು ಕಾರಣಗಳು ಇರಬಹುದು. ಸ್ವಾತಂತ್ರ್ಯಾನಂತರ ಒಂದು ನಿರ್ದಿಷ್ಟ ಬಗೆಯ ಅಭಿವೃದ್ಧಿ

ವ್ಯಾಖ್ಯಾನಗಳನ್ನು ಒಪ್ಪಿಕೊಂಡು ಮುಂದುವರಿದೆವು. ಸಾಂಪ್ರದಾಯಿಕ ಸಮಾಜವನ್ನು ಪೂರ್ತಿಯಾಗಿ ಪರಿವರ್ತಿಸಿ ಆಧುನಿಕಗೊಳಿಸುವುದು ಅದರ ಗುರಿಯಾಗಿತ್ತು. ಹೀಗೆ ಸಂಪ್ರದಾಯದ ಗೋರಿಯ ಮೇಲೆ ಆಧುನಿಕ ಸಮಾಜವನ್ನು ಕಟ್ಟುವ ಸಾಧ್ಯತೆಯನ್ನು ನಮ್ಮ ನಾಯಕರುಗಳು ಒಪ್ಪಿಕೊಂಡೆ ಮುಂದುವರೆದಿರಬಹುದು. ಎರಡನೆಯದಾಗಿ ಈ ಬಗೆಯ ಆಧುನಿಕತೆ ನಮ್ಮ ಸಮಾಜದ ಮೇಲ್ವರ್ಗಗಳಿಗೆ ಮತ್ತು ಸ್ವಲ್ಪ ಮಟ್ಟಿಗೆ ಇತರರಿಗೂ ಕೂಡಾ ಕೆಲವು ಲಾಭಗಳನ್ನಾದರೂ ತಂದುಕೊಟ್ಟಿರಬೇಕು. ಹಾಗಿಲ್ಲದೆ ಹೋದಲ್ಲಿ ಆಧುನೀಕರಣದ ತಾಂತ್ರಿಕ ಬೆಳವಣಿಗೆ ಇಷ್ಟು ವರ್ಷಗಳ ಕಾಲ ಮುಂದುವರಿಯಲು ಸಾಧ್ಯವಾಗುತ್ತಿರಲಿಲ್ಲವೇನೊ.

ಈಗ ಆಧುನೀಕರಣ ಪ್ರಕ್ರಿಯೆ ತೀವ್ರಗೊಳ್ಳುತ್ತಿದೆ ಮತ್ತು ಸ್ಥಳೀಯ ಮೇಲ್ವರ್ಗಗಳನ್ನು ಮತ್ತು ಸಮುದಾಯಗಳನ್ನು ಬಾಧಿಸುತ್ತಿದೆ. ಹೀಗೆ, ಸ್ಥಳೀಯ ಮಟ್ಟದ ಮೇಲ್ವರ್ಗಗಳನ್ನು, ಮತ್ತು ಸಮುದಾಯದ ಸಂಪನ್ಮೂಲಗಳನ್ನು ನಂಬಿಕೊಂಡಿರುವ ಬಹುದೊಡ್ಡ ಸಂಖ್ಯೆಯ ಜನರ ಬದುಕನ್ನು ಪರಿಗಣನೆಗೆ ತೆಗೆದುಕೊಳ್ಳದೆ ಆಧುನೀಕರಣ ಮುಂದುವರಿದಾಗ ಪರಿಸರನಾಶದ ಪ್ರಶ್ನೆ ಬಲಗೊಂಡಿದೆ. ಉದಾಹರಣೆಗೆ ಉತ್ತರ ಭಾರತದಲ್ಲಿ ನಡೆದ ಚಿಪ್ಕೋ ಚಳವಳಿಯನ್ನು ತೆಗೆದು ಕೊಳ್ಳೋಣ. ಮರ ಉಳಿಸುವ ವಿಚಾರದಲ್ಲಿ ಸರಕಾರ ಮತ್ತು ಸ್ಥಳೀಯ ಜನರ ದೃಷ್ಟಿ ಕೋನಗಳಲ್ಲಿನ ಭಿನ್ನತೆ ಇಲ್ಲಿ ಪ್ರಕಟವಾಗಿದೆ. ಸರಕಾರಕ್ಕೆ ಮರ ಸಂರಕ್ಷಣೆ ಎಂದರೆ ಮರಗಳನ್ನು ಬೆಳಸಿ ಕಾರ್ಖಾನೆಗೆ ಮಾರುವ ಕಲ್ಪನೆ. ಆದರೆ, ಸ್ಥಳೀಯರಿಗೆ ಮರ, ಕಾಡು ಎಂದರೆ ಅವರದ್ದು. ಅದು ಅವರ ಸಾಮಾಜಿಕ ಹಾಗೂ ಆರ್ಥಿಕ ಬೇಕು-ಬೇಡಗಳಿಗೆ ಸ್ಪಂದಿಸುವಂತಹದ್ದು. ಸರಕಾರದ ನೀತಿಯಿಂದಾಗಿ ತಮ್ಮ ಪರಿಸರದಲ್ಲಿರುವ ಮರಗಳು ನಾಶವಾಗಿ ಪೇಟೆಯ ಜನರ ಜೀವನದ ಅಗತ್ಯಗಳನ್ನು ಪೂರೈಸಲು ಹೋಗುವುದು, ಈ ಎರಡೂ ಕೂಡ ಅವರಿಂದ ಜೀರ್ಣಿಸಿಕೊಳ್ಳಲು ಆಗದ ವಿಚಾರ. ಇಲ್ಲಿ ತಾಂತ್ರಿಕ ಆಧುನೀಕರಣ ಕೆಲವು ಪ್ರದೇಶಗಳಿಗೆ ಮತ್ತು ಕೆಲವು ಜನರಿಗೆ ಸೀಮಿತಗೊಂಡ ಪ್ರಶ್ನೆಯಾಗಿದೆ. ಅದೇ ರೀತಿಯಲ್ಲಿ ಗಣಿಗಾರಿಕೆ, ಅಣೆಕಟ್ಟು ನಿರ್ಮಾಣ, ರೈಲ್ವೆಮಾರ್ಗ ನಿರ್ಮಾಣ, ಡಿಫೆನ್ಸ್ ಉದ್ದೇಶಕ್ಕಾಗಿ ಭೂಮಿ ಬಳಕೆ ಅಥವಾ ಸಮುದಾಯದ ಸಂಪನ್ಮೂಲಗಳನ್ನು ಬಳಸುವ ಇತರ ಪ್ರಶ್ನೆಗಳು ಕೂಡ ಪರಿಸರ ನಾಶದ ಪ್ರಶ್ನೆಯೊಂದಿಗೆ ಸೇರಿಕೊಳ್ಳುವಲ್ಲಿ ಆಧುನೀಕರಣದ ವಿಫಲತೆಯ ಅಂಶವಿದೆ.

ಸಮುದಾಯದ ಸಂಪನ್ಮೂಲಗಳನ್ನು ಬಳಸುವಲ್ಲಿ ಸ್ಥಳೀಯರಿಗೆ ಹಕ್ಕಿಲ್ಲದಿರುವುದು ಅಥವಾ ಅದರ ವಿಲೇವಾರಿಯ ವಿಚಾರದಲ್ಲಿ ಅಧಿಕಾರವಿಲ್ಲದಿರುವುದು ಮತ್ತು ಅದಕ್ಕೆ ಪ್ರತಿಕ್ರಿಯೆಯಾಗಿ ಪ್ರಕಟಗೊಳ್ಳುವ ಪ್ರತಿಭಟನೆಗಳು ಸ್ವಾಭಾವಿಕವಾದವು ಮತ್ತು ಅವುಗಳನ್ನು ಅರ್ಥಮಾಡಿಕೊಳ್ಳಲು ವಿಶೇಷ ಕಷ್ಟವಿಲ್ಲ. ಸಮುದ್ರದ ನೀರು ಕಾರ್ಖಾನೆಯ ಕಲ್ಮಶ ನೀರಿನಿಂದ ಕೆಡುವುದರ ವಿರುದ್ಧ ಮಂಗಳೂರಿನ ಅಥವಾ ಗೋವಾದ ಅಥವ ತಮಿಳುನಾಡಿನ ಬೆಸ್ತರು ಮಾಡುವ ಪ್ರತಿಭಟನೆ ಹಾಗೂ ಕರ್ನಾಟಕದ ರೈತರು ಯೂಕೋ ಲಿಪ್ಟಸ್ ಮರ ನೆಡುವುದರ ವಿರುದ್ಧ ನಡೆಸುವ ಚಳವಳಿಗಳು ಆಧುನೀಕರಣದಿಂದ ಸಮುದಾಯದ ಸಂಪನ್ಮೂಲಗಳ ಸಂಪ್ರದಾಯಿಕ ಬಳಕೆಗೆ ಆಗುವ ಅಡ್ಡಿ ಆತಂಕಗಳಿಗೆ ಸಂಬಂಧಿಸಿದವುಗಳಾಗಿವೆ. ಇಲ್ಲಿ, ಜನರ

ಹೊಟ್ಟೆ ಬಟ್ಟೆಯ ಪ್ರಶ್ನೆಯು ಆಧುನಿಕವಲ್ಲದ ಮೂಲಗಳಿಂದ ಬಗೆಹರಿಯುತ್ತಿತ್ತು. ತಾಂತ್ರಿಕ ಆಧುನೀಕರಣವು ಆ ಮೂಲಗಳನ್ನು ನಾಶಮಾಡುತ್ತಿದೆ ಎನ್ನುವ ಆತಂಕ ಇಲ್ಲಿದೆ. ಇದು ಸಹಜ ಮತ್ತು ಪ್ರತಿಭಟಿಸಬೇಕಾದುದು ಕೂಡಾ. ಆದರೆ, ತಾಂತ್ರಿಕ ಆಧುನೀಕರಣದ ಸಂಪೂರ್ಣ ಲಾಭವನ್ನು ಪಡೆದು ಅದು ಸಾಧ್ಯಗೊಳಿಸಿದ ಎಲ್ಲಾ ಸರಕು ಮತ್ತು ಸೇವೆಗಳನ್ನು ಅನುಭೋಗಿಸುತ್ತಲೇ ಅಭಿವೃದ್ಧಿಯ ವಿರುದ್ಧ ಎತ್ತುವ ದನಿ ಎಷ್ಟು ಕಾಳಜಿ ಉಳ್ಳದ್ದು ಎನ್ನುವುದನ್ನು ವಿಶ್ಲೇಷಿಸುವುದು ಅಗತ್ಯವಾಗಿದೆ. ಉದಾಹರಣೆಗೆ ದ.ಕ.ಜಿಲ್ಲೆಯಲ್ಲಿ ನಡೆಯುತ್ತಿರುವ ಪರಿಸರ ಚಳುವಳಿ. ಅಲ್ಲಿ ಕೂಡ ಬೆಸ್ತರು ಎಂ.ಆರ್.ಪಿ.ಎಲ್. ವಿರುದ್ಧ ನಡೆಸಿದ ಹೋರಾಟ ಸ್ವಾಭಾವಿಕವಾಗಿದೆ. ಅವರ ಉದ್ದೇಶ ಎಂ.ಆರ್.ಪಿ.ಎಲ್.ನ ಅಸ್ತಿತ್ವವನ್ನು ಪ್ರಶ್ನಿಸುವುದಾಗಿರಲಿಲ್ಲ. ಬದಲಿಗೆ ಅದರ ಇರುವಿಕೆ ಅಥವಾ ಕಾರ್ಯ ವೈಖರಿ ಬೆಸ್ತರ ಜೀವನಕ್ಕೆ ತೊಂದರೆ ಮಾಡಬಾರದೆಂಬ ನೆಲೆಯಲ್ಲಿ ರೂಪುಗೊಂಡದ್ದು.

ಆದರೆ, ಈ ಆಲೆಯನ್ನು ಏರಿ ಬಲಗೊಂಡ ಪರಿಸರ ಚಳವಳಿ ಅಲ್ಲಿ ಯಾವುದೇ ಬೃಹತ್ ಉದ್ದಿಮೆಗಳು ಬರಬಾರದೆಂಬ ವಾದವನ್ನು ಮುಂದಿಡುತ್ತ ಬಂದಿವೆ. ಆ ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಪರಿಸರವಾದಿಗಳ ವಾದ ತುಂಬ ಅಸಹಜವಾಗುತ್ತದೆ. ಯಾಕೆಂದರೆ ಅಭಿವೃದ್ಧಿಯ ಸಾಂಪ್ರದಾಯಿಕ ಸಂಕೇತಗಳಾದ ವಿವಿಧ ಆರ್ಥಿಕ ಚಟುವಟಿಕೆಗಳಲ್ಲಿ ಕಾರ್ಮಿಕ ಅವಲಂಬನೆ ಮತ್ತು ಅವುಗಳಿಂದ ಬರುವ ಆದಾಯ, ರಸ್ತೆ, ವಿದ್ಯುತ್ ಶಕ್ತಿ, ಮತ್ತು ಇತರ ಆಧುನಿಕ ಸೌಲಭ್ಯಗಳ ಬಳಕೆ-ಇವೇ ಮುಂತಾದವುಗಳ ಇರುವಿಕೆಯ ದೃಷ್ಟಿಯಿಂದ ದ.ಕ. ಜಿಲ್ಲೆ ಮುಂದುವರಿದ ಜಿಲ್ಲೆ. ಇದರ ಅರ್ಥ ಅಲ್ಲಿಯ ಪ್ರತಿಯೊಬ್ಬರು ಈ ರೀತಿಯ ಮುಂದುವರಿಕೆಯಲ್ಲಿ ಪಾಲುದಾರರೆಂದಲ್ಲ. ಅದೇನೇ ಇರಲಿ, ಇಲ್ಲಿ ನಾವು ಗಮನಿಸಬೇಕಾದ ವಿಚಾರವೆಂದರೆ ತಾಂತ್ರಿಕ ಆಧುನೀಕರಣ ಬಹುತೇಕ ಸೌಲಭ್ಯಗಳನ್ನು ಅನುಭವಿಸುವ ಒಂದು ಪ್ರದೇಶದ ಜನರು ಆ ಸೌಲಭ್ಯಗಳನ್ನು ಉತ್ಪಾದಿಸುವ ಕೆಲವೊಂದು ಉದ್ದಿಮೆಗಳನ್ನು ತಮ್ಮ ಕ್ಷೇತ್ರದಲ್ಲಿ ಸ್ಥಾಪಿಸುವ ಪ್ರಶ್ನೆ ಬಂದಾಗ ಪರಿಸರನಾಶದ ವಾದವನ್ನು ಮುಂದಿಡುತ್ತಾರೆ. 'ಕೊಜಂಟ್ರಿಕ್ಸ್ ಬೇಡ' ಎಂಬ ಕೂಗಿನೊಂದಿಗೆ ಆರಂಭವಾದ ಪರಿಸರ ಚಳವಳಿ ಇಂದು ಯಾವುದೇ ಬೃಹತ್ ಉದ್ದಿಮೆಗಳು ಬೇಡ ಎಂಬ ಹಂತಕ್ಕೆ ತಲುಪಿದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ: 'ವಿದ್ಯುತ್ ಬೇಡ, ಆಧುನಿಕ ವಾಹನ ಸೌಕರ್ಯಗಳು ಬೇಡ' ಎಂಬ ವಿಚಾರಗಳ ಬದಲಿಗೆ ಅವುಗಳನ್ನು ಉತ್ಪಾದಿಸುವ ಘಟಕಗಳು ಜಿಲ್ಲೆಯಲ್ಲಿ ಸ್ಥಾಪನೆಯಾಗುವುದು ಬೇಡ ಎನ್ನುವುದು ತುಂಬ ಪ್ರಚಾರ ಪಡೆಯುತ್ತಿದೆ. ಅಂದರೆ ಅನುಭೋಗ ಶೈಲಿಯಲ್ಲಿ ಮೂಲಭೂತ ಪರಿವರ್ತನೆಯ ಪ್ರಶ್ನೆಯನ್ನು ಒಳಗೊಳ್ಳದ ಪರಿಸರವಾದವನ್ನು ಮುಂದಿಡಲಾಗುತ್ತಿದೆ. ಅನುಭೋಗ ಶೈಲಿಯಲ್ಲಿ ಮೂಲಭೂತ ಪರಿವರ್ತನೆ ಇಲ್ಲದೆ ಕೇವಲ ಉದ್ಯಮೀಕರಣವನ್ನು ವಿರೋಧಿಸುವ ಮೂಲಕ ತಮ್ಮ ಪರಿಸರ ರಕ್ಷಣೆ ಸಾಧ್ಯವಾಗಲಿಕ್ಕಿಲ್ಲ. ಈ ರೀತಿಯ ಪರಿಸರವಾದದಿಂದ/ಚಳುವಳಿಯಿಂದ ಹೆಚ್ಚೆಂದರೆ ನಾವು ಪರಿಸರ ಮಾಲಿನ್ಯವನ್ನು ಸ್ಥಳಾಂತರಿಸಬಹುದು ಅಥವಾ ಮುಂದಕ್ಕೆ ಹಾಕಬಹುದೇ ಹೊರತು ಮಾಲಿನ್ಯ ರಹಿತ ಉತ್ಪಾದನಾ ವ್ಯವಸ್ಥೆಯ ನಿರ್ಮಾಣಕ್ಕೆ ಪ್ರಯತ್ನಿಸಿದಂತಾಗುವುದಿಲ್ಲ.

ಇಂದು ಶ್ರೀಮಂತ ರಾಷ್ಟ್ರಗಳು ಜಾಗತೀಕರಣದ ಹೆಸರಿನಲ್ಲಿ ಪರಿಸರ ಮಾಲಿನ್ಯವನ್ನು ಸ್ಥಳಾಂತರಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಬಂಡವಾಳದ ಅನಿಯಂತ್ರಿತ ಚಲನೆಗೆ ಒತ್ತುಕೊಡುವ ಎಲ್ಲಾ ಕಾರ್ಯಕ್ರಮಗಳು ರಚನಾತ್ಮಕ ಹೊಂದಾಣಿಕೆಯ ಹೆಸರಿನಲ್ಲಿ ನಡೆಯುತ್ತಿವೆ. ಇದರ ಒಟ್ಟು ಉದ್ದೇಶ ಬಂಡವಾಳದ ಶೋಷಣೆಗೆ ಒಳಪಡದ ಸಂಪನ್ಮೂಲಗಳನ್ನು ಮಾರುಕಟ್ಟೆಯ ವ್ಯಾಪ್ತಿಯೊಳಗೆ ತರುವುದಾಗಿದೆ. ಇದು ಪರಿಸರ ಮತ್ತು ಸಂಪನ್ಮೂಲಗಳ ಮೇಲೆ ಎರಡು ರೀತಿಯ ಪ್ರಭಾವ ಬೀರುವ ಸಾಧ್ಯತೆ ಇದೆ. ಒಂದು: ಈ ಹಿಂದೆ ಚರ್ಚಿಸಿದಂತೆ ಮಾರುಕಟ್ಟೆ ಮೌಲ್ಯಗಳು ರೂಪುಗೊಳ್ಳದೆ ಇರುವ ವ್ಯವಸ್ಥೆಯನ್ನು ಮಾರುಕಟ್ಟೆಯೊಂದಿಗೆ ಜೋಡಿಸುವ ಮೂಲಕ ಸ್ಥಳೀಯ ಸಂಪನ್ಮೂಲಗಳನ್ನು ತುಂಬ ಅಗ್ಗದ ಬೆಲೆಗೆ ಕೊಂಡುಕೊಳ್ಳುವುದು ಮತ್ತು ಆ ಮೂಲಕ ಆ ಸಂಪನ್ಮೂಲಗಳನ್ನು ಆಧರಿಸಿ ಬದುಕುವ ಜನರನ್ನು ಮಾರುಕಟ್ಟೆಯ ವ್ಯವಸ್ಥೆಯೊಳಗೆ ವ್ಯವಹರಿಸುವಂತೆ ಬಲಾತ್ಕರಿಸುವುದು. ಇದು ಸಂಪನ್ಮೂಲದ ಅತಿಯಾದ ಬಳಕೆಗೆ ಕಾರಣವಾಗುತ್ತದೆ. ಎರಡನೆಯದಾಗಿ ಶ್ರೀಮಂತ ರಾಷ್ಟ್ರಗಳಲ್ಲಿ ಪರಿಸರ ನಾಶಕ್ಕೆ ಎಡೆಮಾಡಿಕೊಡಬಹುದಾದ ಸರಕುಗಳ ಉತ್ಪಾದನೆಯನ್ನು ಬಡರಾಷ್ಟ್ರಗಳಿಗೆ ಸ್ಥಳಾಂತರಿಸುವುದು. ಹೊಸ ಅಂತಾರಾಷ್ಟ್ರೀಯ ಶ್ರಮವಿಭಜನೆ ಎಂಬ ಪದಗಳ ಬಳಕೆ ಪ್ರಸಕ್ತದಲ್ಲಿ ಚಾಲ್ತಿಯಲ್ಲಿರುವ ಹೊಸ ಬಗೆಯ ಶ್ರಮ ವಿಭಜನೆಯನ್ನು ವಿವರಿಸುತ್ತದೆ. ಇದರ ಪ್ರಕಾರ ಒಂದು ಸರಕಿನ ಬಿಡಿಭಾಗಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಉತ್ಪಾದಿಸಿ ಕೇಂದ್ರ ಸ್ಥಳದಲ್ಲಿ ಅದರ ಜೋಡಣೆ ಕೆಲಸ ಮಾತ್ರ ಸಾಗುತ್ತದೆ. ಇದರ ಮುಖ್ಯ ಉದ್ದೇಶ ಕಡಿಮೆ ಸಂಬಳಕ್ಕೆ ದೊರೆಯುವ ತೃತೀಯ ಜಗತ್ತಿನ ಕಾರ್ಮಿಕರನ್ನು ಉಪಯೋಗಿಸುವುದು ಮತ್ತು ಪರಿಸರ ಮಾಲಿನ್ಯಕ್ಕೆ ಕಾರಣವಾಗಬಹುದಾದ ಸರಕುಗಳ ಉತ್ಪಾದನೆಯನ್ನು ಬಡರಾಷ್ಟ್ರಗಳಿಗೆ ವರ್ಗಾಯಿಸುವುದು. ಹೊಸ ಅಂತಾರಾಷ್ಟ್ರೀಯ ಶ್ರಮ ವಿಭಜನೆಯ ಹೆಸರಿನಲ್ಲಿ ಶ್ರೀಮಂತ ರಾಷ್ಟ್ರಗಳು ಪರಿಸರ ಮಾಲಿನ್ಯ ಮತ್ತು ತಮ್ಮ ಕಾರ್ಮಿಕರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರಬಹುದಾದ ಸರಕುಗಳ ಉತ್ಪಾದನೆಯನ್ನು ಬಡ ದೇಶಗಳಿಗೆ ವರ್ಗಾಯಿಸುತ್ತಿದ್ದಾರೆ. ಇದೇ ಪ್ರವೃತ್ತಿಯನ್ನು ರಾಷ್ಟ್ರೀಯ ಮಟ್ಟದಲ್ಲಿ ಕಾಣಬಹುದು. ಅಭಿವೃದ್ಧಿ ಹೊಂದಿದ ಪ್ರದೇಶಗಳು ಅಥವಾ ಪರಿಸರ ಚಳುವಳಿಗಳನ್ನು ಹುಟ್ಟು ಹಾಕಬಲ್ಲ ಸಮುದಾಯಗಳು ಪರಿಸರ ಮಾಲಿನ್ಯಕ್ಕೆ ಕಾರಣವಾಗಬಹುದಾದ ಉದ್ಯಮಗಳು ತಮ್ಮ ಕ್ಷೇತ್ರಗಳಲ್ಲಿ ಸ್ಥಾಪನೆಯಾಗದಂತೆ ನೋಡಿ ಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ, ಈ ಬಗೆಯ ಪರಿಸರವಾದ ಅಥವ ಚಳವಳಿಯಿಂದ ಪರಿಸರ ಸಮಸ್ಯೆಗೆ ಶಾಶ್ವತವಾದ ಪರಿಹಾರ ಕಂಡುಕೊಂಡಂತೆ ಆಗುವುದಿಲ್ಲ.

ಪರಿಸರ ಸಮಸ್ಯೆಯನ್ನು ಕೈಗಾರೀಕಿಕರಣಕ್ಕೆ ಸೀಮಿತಗೊಳಿಸಿ ಚರ್ಚಿಸುವುದು ಅದರ ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಸಹಕಾರಿಯಾಗುವುದಿಲ್ಲ. ಈ ರೀತಿಯ ಚರ್ಚೆಗಳಲ್ಲಿ, ಬಹುತೇಕ ಸಂದರ್ಭಗಳಲ್ಲಿ ಕೈಗಾರಿಕೀಕರಣಕ್ಕಿಂತ ಬಂಡವಾಳಪೂರ್ವ ವ್ಯವಸ್ಥೆಯನ್ನು ಒಂದು ಸಾವಯವ ಸಮಾಜ ಎಂದು ತಿಳಿಯಲಾಗುತ್ತದೆ ಹಾಗೂ ಅದನ್ನು ವೈಭವೀಕರಿಸಲಾಗುತ್ತದೆ. ವರ್ಗಭೇದಗಳು, ಸಂಘರ್ಷಗಳು, ವೈರುದ್ಧ್ಯಗಳು ಇವೇ ಮುಂತಾದವುಗಳು ಈ ರೀತಿಯ

ಕಲ್ಪನೆಯಲ್ಲಿ ಕೈಗಾರಿಕೀಕರಣದ ಭಾಗವಾಗಿ; ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ ಇದಕ್ಕೆ ವಿರುದ್ಧವಾದ ಸುಖೀರಾಜ್ಯವಾಗಿ ಬಿಡುತ್ತದೆ. ಇದನ್ನು ಸ್ವಲ್ಪ ವಿವರವಾಗಿ ಇಲ್ಲಿ ಕೊಟ್ಟಿದ್ದೇನೆ. ಔದ್ಯಮಿಕರಣದಿಂದ ಕಣ್ಣಿಗೆ ರಾಚುವಂತೆ ಪರಿಸರ ನಾಶವಾಗಿದೆ, ಜಲಮಾಲಿನ್ಯವಾಗಿದೆ ಮತ್ತು ಆಗುತ್ತಿದೆ, ವಾಯುಮಾಲಿನ್ಯ ಆಗಿದೆ ಮತ್ತು ಆಗುತ್ತಿದೆ. ಆದರೆ, ಪರಿಸರ ನಾಶದಲ್ಲಿ ಕೇವಲ ಔದ್ಯಮಿಕರಣದ ಪಾತ್ರ ಮಾತ್ರವಿದೆ ಎನ್ನುವಂತಿಲ್ಲ. ಆಧುನಿಕ ತಂತ್ರಜ್ಞಾನದ ಆಗಮನಕ್ಕಿಂತ ಮೊದಲೂ ನಾಗರಿಕತೆಗಳು ನಾಶವಾದ ಬಗ್ಗೆ, ಕಾಡು ನಾಡದ ಬಗ್ಗೆ, ನಾಡು ಮರುಭೂಮಿಯಾದ ಬಗ್ಗೆ ನಮಗೆ ತಿಳಿದೇ ಇದೆ. ಮಾನವ ನಡೆದು ಬಂದ ಚರಿತ್ರೆಯ ಪುಟಗಳನ್ನು ತೆಗೆದು ನೋಡಿದರೆ ಹೆಜ್ಜೆ ಹೆಜ್ಜೆಗೂ ಆತನಿಂದ ಪರಿಸರದ ಮೇಲೆ ಧಾಳಿ ನಡೆದುದು ಕಂಡುಬರುತ್ತದೆ. ಈ ವಾದವನ್ನು ಮುಂದಿಟ್ಟ ಕೂಡಲೇ ಕೈಗಾರಿಕೀಕರಣದಿಂದ ಆದ ಪರಿಸರ ನಾಶದ ಪ್ರಮಾಣವನ್ನು ಅದರ ಹಿಂದಿನ ಪರಿಸರ ನಾಶಕ್ಕೆ ಹೋಲಿಸುವಂತಿಲ್ಲ ಎಂದು ವಾದಿಸಬಹುದು. ಅದು ಸರಿ ಕೂಡ. ನನ್ನ ಉದ್ದೇಶ ಪರಿಸರ ನಾಶ ಮತ್ತು ಕೈಗಾರಿಕೀಕರಣಕ್ಕೆ ಸಂಬಂಧವಿಲ್ಲ ಎಂದು ವಾದಿಸುವುದಲ್ಲ. ಆದರೆ, ಇದನ್ನು ಮಾನವ ನಡೆದು ಬಂದ ಚರಿತ್ರೆಯಿಂದ ಬೇರ್ಪಡಿಸಿ ನೋಡುವುದು ಸರಿಯಲ್ಲ ಎಂದು ವಾದಿಸುವುದಾಗಿದೆ.

ವರ್ತಮಾನದ ಆಧುನೀಕರಣಕ್ಕೆ ಸೀಮಿತಗೊಂಡಂತೆ ಪರಿಸರ ಸಮಸ್ಯೆಯನ್ನು ಚರ್ಚಿಸುತ್ತಿದ್ದರೆ ಕೃಷಿಯಿಂದ ಆಗುತ್ತಿರುವ ಪರಿಸರನಾಶ ಸಾಮಾನ್ಯವಲ್ಲ. ಇಂದು ಕೃಷಿಯ ವ್ಯಾಪ್ತಿ ಮತ್ತು ಆಳ ಹೆಚ್ಚಿದೆ. ಅದನ್ನು ಸಾಂಪ್ರದಾಯಿಕ ಮಾನದಂಡದಿಂದ ಅಳೆಯುವುದು ಸರಿಯಲ್ಲ. ಬಂಡವಾಳ ಆಧಾರಿತ ಕೃಷಿಯು ಇಂದು ತಂತ್ರಜ್ಞಾನದ ಬಳಕೆ, ಬಂಡವಾಳದ ಉಪಯೋಗ ಮತ್ತು ಮಾರುಕಟ್ಟೆ ವ್ಯವಸ್ಥೆಯಲ್ಲಿ ವ್ಯವಹರಿಸುವ ದೃಷ್ಟಿಯಿಂದ ಯಾವುದೇ ಕೈಗಾರಿಕ ಚಟುವಟಿಕೆಗಿಂತ ಭಿನ್ನವಾಗಿಲ್ಲ. ಆಧುನಿಕ ತಂತ್ರಜ್ಞಾನ, ರಸಗೊಬ್ಬರ, ಹೈಬ್ರಿಡ್‌ಬೀಜ ಮುಂತಾದವುಗಳ ಬಳಕೆಯಿಂದ ಇದು ಪರೋಕ್ಷವಾಗಿ ಪರಿಸರ ನಾಶಕ್ಕೆ ಎಡೆಮಾಡಬಹುದಾದ ಉದ್ಯಮಗಳ ಬೆಳವಣಿಗೆಗೆ ಕಾರಣವಾಗುತ್ತಿದೆ. ಕೃಷಿಯಲ್ಲಿ ಉಪಯೋಗಿಸುತ್ತಿರುವ ರಾಸಾಯನಿಕ ಗೊಬ್ಬರ, ಕೀಟನಾಶಕಗಳು ಮುಂತಾದವುಗಳು ಮಣ್ಣು ಮತ್ತು ಜಲಮಾಲಿನ್ಯದಲ್ಲಿ ಪ್ರಮುಖ ಪಾತ್ರ ವಹಿಸಿವೆ. ಪರಿಸರ ಚಳವಳಿಯ ಇಡಿ ಗಮನ ಕೈಗಾರಿಕೀಕರಣದಿಂದ ಆಗುವ ಪರಿಸರ ನಾಶದ ಕಡೆಗೆ ಇರುವುದರಿಂದ ಕೃಷಿಯಿಂದ ಆಗುವ ಪರಿಸರನಾಶದ ಬಗ್ಗೆ ವಿಶೇಷ ಗಮನ ಹರಿಸಿಲ್ಲವೆಂದೇ ತಿಳಿಯಬೇಕಾಗಿದೆ.

## ಪರಿಸರ ನಾಶ ಮತ್ತು ಉದ್ಯಮೀಕರಣ

ಕೈಗಾರಿಕೀಕರಣ ಮತ್ತು ಪರಿಸರ ನಾಶಕ್ಕೆ ನೇರ ಸಂಬಂಧ ಕಲ್ಪಿಸುವ ಪ್ರಸ್ತುತ ಪರಿಸರ ವಾದಗಳು ಉದ್ಯಮೀಕರಣದ ದುಷ್ಪರಿಣಾಮಗಳನ್ನು ವಿವರಿಸುವ ಜೊತೆ ಜೊತೆಗೆ ಅದು ಯಾವ ರೀತಿ ಸಮುದಾಯದ ಸಂಪನ್ಮೂಲಗಳನ್ನು ಸ್ಥಳೀಯವಲ್ಲದವರ ಆಸಕ್ತಿಗಳ ಪೂರೈಕೆಗೆ ಉಪಯೋಗಿಸುತ್ತಿದೆ ಮತ್ತು ಈ ಪ್ರಕ್ರಿಯೆ ಯಾವ ರೀತಿಯಲ್ಲಿ ಸ್ಥಳೀಯರನ್ನು ಸಮುದಾಯದ ಸಂಪನ್ಮೂಲ ವಿಲೇವಾರಿಯ ವಿಚಾರದಲ್ಲಿ ಹೊರಗಿಡುತ್ತಿದೆ ಎನ್ನುವುದಕ್ಕೆ ಒತ್ತು ಕೊಟ್ಟಿದೆ.

ಈ ವಿಚಾರವನ್ನು ವಿವಿಧ ರೀತಿಯಲ್ಲಿ ವಿವರಿಸಲಾಗಿದೆ. ಉದಾಹರಣೆಗೆ ` ನಗರ ಮತ್ತು ಗ್ರಾಮೀಣ' ` ನಾಡು ಮತ್ತು ಕಾಡು' `ತೋಪು ಮತ್ತು ಕಾಡು' ಇವೇ ಮುಂತಾದವುಗಳು ಆಧುನಿಕ ಮತ್ತು ಸಾಂಪ್ರದಾಯಿಕ ವ್ಯವಸ್ಥೆಗಳು ಏಕಕಾಲದಲ್ಲಿ ಕಾರ್ಯ ಪ್ರವೃತ್ತರಾಗಿರುವ ಒಂದು ವ್ಯವಸ್ಥೆಯನ್ನು ವಿವರಿಸುತ್ತಿವೆ. ಬೃಹತ್ ಉದ್ಯಮಗಳು, ಗಣಿಗಾರಿಕೆಗಳು, ಸಮುದಾಯದ ಜಲ, ಭೂಮಿ, ಖನಿಜ ಮುಂತಾದವುಗಳನ್ನು ಉಪಯೋಗಿಸಿಕೊಂಡು ಉತ್ಪಾದಿಸುವ ಸರಕು ಬಹುತೇಕ ಸಂದರ್ಭಗಳಲ್ಲಿ ದೂರದಲ್ಲಿರುವ ಮಾರುಕಟ್ಟೆಗೆ ಮೀಸಲಾಗಿದೆ. ದೊಡ್ಡ ಉದ್ಯಮಗಳನ್ನು ಸ್ಥಾಪಿಸಲು ನೀರು, ಭೂಮಿ, ಮತ್ತಿತರ ಸಂಪನ್ಮೂಲಗಳನ್ನು ಸರಕಾರವೇ ನೇರ ಮಧ್ಯಸ್ಥಿಕೆ ವಹಿಸಿ ಒದಗಿಸಿಕೊಡುತ್ತಿದೆ. ಈ ಕಾರಣದಿಂದ ದೊಡ್ಡ ಉದ್ಯಮಗಳು ಸಣ್ಣ ಉದ್ಯಮಗಳಿಗಿಂತ ಪ್ರಭಾವಶಾಲಿಯಾಗಿವೆ. ಇವೆಲ್ಲವೂ ಅಂತಿಮವಾಗಿ ಆಧುನಿಕ ಮಾರುಕಟ್ಟೆ ವ್ಯವಸ್ಥೆಯೊಳಗೆ ಬರುವವರ ಲಾಭಕ್ಕಾಗಿ ಬಳಕೆಯಾಗುತ್ತಿವೆಯೇ ಹೊರತು; ಸ್ಥಳೀಯರ ಉಪಯೋಗಕ್ಕಾಗಿ ಅಲ್ಲ ಎನ್ನುವ ಕೂಗು ಉದ್ಯಮೀಕರಣದ ವಿರೋಧದಲ್ಲಿ ಪ್ರಧಾನವಾಗಿದೆ. ಇದರಲ್ಲಿ ಸ್ವಲ್ಪ ಸಂತ್ಯಾಂಶವಿದೆ. ಇಲ್ಲಿ ಬಂಡವಾಳ ಮತ್ತು ಅದು ಸಾಧ್ಯವಾಗಿಸುವ ಇತರ ಉತ್ಪಾದನಾ ಮೂಲಗಳ ಮೇಲಿನ ಹತೋಟಿಯನ್ನು ಹೊಂದಿರುವ ಒಂದು ವರ್ಗ ಸಮುದಾಯದ ಸಂಪನ್ಮೂಲಗಳು ಕೆಲವೇ ಜನರ ಉಪಯೋಗಕ್ಕೆ ಬಳಕೆಯಾಗುವಂತಹ ವಾತಾವರಣವನ್ನು ನಿರ್ಮಾಣ ಮಾಡುತ್ತಿದೆ. ಆದ್ದರಿಂದ, ಸಂಪನ್ಮೂಲವನ್ನು ಬಳಸುವಲ್ಲಿ ಬಂಡವಾಳದ ಈ ವಿಶೇಷ ಹಕ್ಕು ಪ್ರಶ್ನಾರ್ಹವಾಗಿದೆ. ಇದನ್ನು ಎಡ ಪಂಥಿಯರು ಬಹಳ ಹಿಂದಿನಿಂದಲೂ ಪ್ರತಿಪಾದಿಸುತ್ತ ಬಂದಿದ್ದಾರೆ.

ಆದರೆ, ಇಲ್ಲಿ ನಾವು ವಿಶ್ಲೇಷಿಸಬೇಕಾದ ಎರಡು ವಿಚಾರಗಳಿವೆ; ಒಂದು `ನಗರ ಮತ್ತು ಗ್ರಾಮ' ಅಥವಾ `ಆಧುನಿಕ ಮತ್ತು ಸಾಂಪ್ರದಾಯಿಕ' ಮುಂತಾದ ಪದಗಳ ಮೂಲಕ ವಿವರಿಸುವ ಎರಡು ವ್ಯವಸ್ಥೆಗಳು ಇಂದು ನಮ್ಮಲ್ಲಿ ಪರಸ್ಪರ ಭಿನ್ನವಾದ ಮತ್ತು ಯಾವುದೇ ರೀತಿಯ ಸಂಬಂಧವಿಲ್ಲದ ಎರಡು ವ್ಯವಸ್ಥೆಗಳಾಗಿ ಚಿತ್ರಿಸಲ್ಪಟ್ಟಿವೆ. ಈ ರೀತಿಯ ವಿವರಣೆಗಳು ಒಂದಕ್ಕೆ ಎಲ್ಲ ರೀತಿಯ ನಕರಾತ್ಮಕ ಗುಣಗಳನ್ನು ಆರೋಪಿಸಿದರೆ ಇನ್ನೊಂದಕ್ಕೆ ಬಹುತೇಕ ಸಂದರ್ಭದಲ್ಲಿ ಗ್ರಾಮೀಣ ಅಥವಾ ಬಂಡವಾಳಪೂರ್ವ ವ್ಯವಸ್ಥೆಗೆ ಸುಖೀರಾಜ್ಯದ ಸರ್ವ ಗುಣಗಳನ್ನು ಆರೋಪಿಸುತ್ತಿವೆ. ಪರಿಸರ ವಾದಗಳು ಕೈಗಾರಿಕೀಕರಣದ ದುಷ್ಪರಿಣಾಮವನ್ನು ಪ್ರಚಾರ ಪಡಿಸುವ ಭರದಲ್ಲಿ ನಮ್ಮ ಬಂಡವಾಳ ಪೂರ್ವ ವ್ಯವಸ್ಥೆಯನ್ನು ವೈಭವೀಕರಿಸುವ ಎಲ್ಲಾ ಸಾಧ್ಯತೆಗಳೂ ಕಂಡುಬರುತ್ತಿವೆ. ಅಂದರೆ: ಬಂಡವಾಳ ಪೂರ್ವ ವ್ಯವಸ್ಥೆಯಲ್ಲಿ (ಅದು ಗ್ರಾಮ ಅಥವಾ ಕಾಡು ಅಥವಾ ಸಾಂಪ್ರದಾಯವಾಗಿರಬಹುದು) ವರ್ಗ ಬೇಧಗಳಿಲ್ಲ ಸಾಮಾಜಿಕ ವೈರುದ್ಧಗಳಿಲ್ಲ. ಬದಲಾಗಿ ಅದೊಂದು ಸಾವಯುವ ಸಮಾಜವಾಗಿ ಬಿಡುತ್ತದೆ. ಅಲ್ಲಿ ಪ್ರತಿಯೊಬ್ಬರು ತುಂಬಾ ಸುಖವಾಗಿದ್ದರು. ಯಾಕೆಂದರೆ ಅಲ್ಲಿ ಅವರ ಸುಖ ನೆಮ್ಮದಿಯನ್ನು ಹಾಳುಗೆಡಿಸಲು ಆಧುನಿಕತೆಯಿರಲಿಲ್ಲ, ಕೈಗಾರಿಕೆಗಳಿರಲಿಲ್ಲ. ಈ ರೀತಿಯ ವಾದವು ಸಾಂಪ್ರದಾಯಿಕ ಸಮಾಜದ ಮೇಲುವರ್ಗದ ದೃಷ್ಟಿಯಿಂದ ತುಂಬಾ ಅನುಕೂಲವಾಗುತ್ತದೆ. ಏಕೆಂದರೆ ಸ್ವತಂತ್ರ್ಯಾನಂತರ ಆಧುನೀಕರಣದ ಮೂಲಕ ನಾವು ಸಾಂಪ್ರದಾಯಿಕ ಸಮಾಜದಲ್ಲಿನ

ಸಾಮಾಜಿಕ ಸಂಬಂಧಗಳಲ್ಲಿ ಪರಿವರ್ತನೆಗೆ ಪ್ರಯತ್ನಿಸಿದೆವು. ಅದು ಎಷ್ಟರ ಮಟ್ಟಿಗೆ ಸಾಧ್ಯವಾಗಿದೆ ಎನ್ನುವದನ್ನು ಇಲ್ಲಿ ಚರ್ಚಿಸಿಲ್ಲ. ಒಂದು ವೇಳೆ ಆಧುನಿಕರಣದ ವಿಫಲತೆಯನ್ನು ಒಪ್ಪಿಕೊಳ್ಳುವುದಾದರೂ ಅದಕ್ಕೆ ಪರಿಹಾರ ಸಂಪ್ರದಾಯಕ್ಕೆ ಶರಣಾಗುವುದು ಎಂದು ಅರ್ಥೈಸಿಕೊಳ್ಳುವುದು ಸರಿಯಾಗಲ್ಲಿಕ್ಕಿಲ್ಲ. ಪರಿಸರ ನಾಶವನ್ನು ಪ್ರತಿಭಟಿಸುವ ಭರದಲ್ಲಿ ಅಧುನೀಕರಣದಿಂದ ನಮ್ಮ ಸಮಾಜದ ಕೆಳವರ್ಗಕ್ಕೆ ಆದ ಮತ್ತು ಆಗಬಹುದಾದ ಲಾಭವನ್ನು ಸಂಪೂರ್ಣ ಧಿಕ್ಕರಿಸುವುದು ಕೂಡ ಸರಿಯಾಗಲ್ಲಿಕ್ಕಿಲ್ಲ.

ಎರಡನೆಯದಾಗಿ ಸಮುದಾಯದ ಸಂಪನ್ಮೂಲಗಳ ವಿಲೇವಾರಿಯ ಪ್ರಶ್ನೆ ಉದ್ಯಮೀಕರಣ ಯಾವ ರೀತಿಯಲ್ಲಿ ಸಂಪತ್ತಿನ ಕೇಂದ್ರೀಕೃತ ಬೆಳವಣಿಗೆಗೆ ಅವಕಾಶ ಮಾಡಿಕೊಡುತ್ತದೆ ಎನ್ನುವುದರತ್ತ ನೇರವಾಗಿ ಬೆಳಕು ಚೆಲ್ಲುವ ಪ್ರಯತ್ನ ಇಲ್ಲಿ ಇಲ್ಲದಿದ್ದರೂ ಪರೋಕ್ಷವಾಗಿ ಬೊಟ್ಟು ಮಾಡಿ ತೋರಿಸುವ ಹಲವಾರು ವಿವರಣೆಗಳು ಸಂಪತ್ತಿನ ವಿಲೇವಾರಿಯ ಪ್ರಶ್ನೆಯೊಂದಿಗೆ ಬೆಸೆದುಕೊಂಡಿವೆ. ಉದಾಹರಣೆಗೆ: ಗಣಿಗಾರಿಕೆ ಅಥವಾ ಬೃಹತ್ ಉದ್ಯಮಗಳು ಸ್ಥಳೀಯರಲ್ಲದವರ ಹತೋಟಿಯಲ್ಲಿದ್ದು, ಸ್ಥಳೀಯ ಸಂಪನ್ಮೂಲಗಳ ಬಳಕೆ ಮತ್ತು ಅದರಿಂದ ಸಾಧ್ಯವಾಗುವ ಸರಕು/ಸೇವೆಯ ಉತ್ಪಾದನೆ ಬಹುತೇಕ ಸಂದರ್ಭದಲ್ಲಿ ದೂರದ ನಗರವಾಸಿಗಳ ಬಳಕೆಗೆ ಹೇಗೆ ಸೀಮಿತವಾಗುತ್ತಿವೆ ಎನ್ನುವುದನ್ನು ವಿವರಿಸುವ ಮೂಲಕ ಪರಿಸರವಾದ ಉದ್ಯಮೀಕರಣದ ಕೇಂದ್ರೀಕೃತ ಮತ್ತು ನಗರದ ಕಡೆಗೆ ಆಸಕ್ತಿ ತೋರಿಸುವ ಆರ್ಥಿಕ ಚಟುವಟಿಕೆಗಳಿಗೆ ಅವಕಾಶ ಮಾಡಿಕೊಡುತ್ತದೆ ಎನ್ನುವ ಕಡೆಗೆ ನಮ್ಮ ಗಮನವನ್ನು ಸೆಳೆದಿದೆ. ಈ ವಿವರಣೆಯ ಪ್ರಕಾರ ಅಭಿವೃದ್ಧಿಶೀಲ ಸಮಾಜದಲ್ಲಿನ ನಗರಗಳನ್ನು ವಸಾಹತುಶಾಹಿಗಳ ರೂಪದಲ್ಲಿ ಚಿತ್ರಿಸಲಾಗುತ್ತಿದೆ. ಈ ನಗರ (ವಸಾಹತುಗಳು) ಗ್ರಾಮೀಣ ಪ್ರದೇಶಗಳಿಂದ ಅಥವಾ ಹಿಂದುಳಿದ ಪ್ರದೇಶಗಳಿಂದ ಸಂಪನ್ಮೂಲಗಳನ್ನು ಕೊಳ್ಳೆ ಹೊಡೆದು ಬರಿದಾಗಿಸುತ್ತಿವೆ. ಈ ಹಿಂದುಳಿದ ಅಥವಾ ಗ್ರಾಮೀಣ ಪ್ರದೇಶಗಳಿಗೆ ಈ ರೀತಿಯ ಉದ್ಯಮೀಕರಣದಿಂದ ಸಿಗುವುದು ಪರಿಸರ ನಾಶ ಮತ್ತು ಮಾಲಿನ್ಯ ಮಾತ್ರ, ಇವೇ ಮುಂತಾದ ವಿವರಣೆಗಳು ಈ ಹಿನ್ನೆಲೆಯಲ್ಲಿ ಧಾರಾಳವಾಗಿ ಸಿಗುತ್ತವೆ. ಈ ವಿವರಣೆಗಳಲ್ಲಿ ಸತ್ಯಾಂಶವಿಲ್ಲ ಎನ್ನಲು ಸಾಧ್ಯವಿಲ್ಲ. ಆದರೆ, ಈ ಕ್ರಮದ ವಿವರಣೆ ಪರಸ್ಪರ ಸಂಬಂಧವಿಲ್ಲದ ಎರಡು ವ್ಯವಸ್ಥೆಗಳನ್ನು ಸೃಷ್ಟಿಸುತ್ತವೆ. ಈ ಹಿಂದೆ ವಿವರಿಸಿದಂತೆ ಅವುಗಳು ಪರಸ್ಪರ ಸಂಬಂಧಿಸಿಲ್ಲದೆ ಇದ್ದರೂ ಶೋಷಿಸುವ ಮತ್ತು ಶೋಷಣೆಗೆ ಒಳಗಾಗುವ ಸಂಬಂಧ ಇರುವುದು ಒಟ್ಟು ವಿವರಣೆಯಲ್ಲಿ ಕಂಡುಬರುವ ತಾತ್ವಿಕ ಲೋಪದತ್ತ ಬೊಟ್ಟು ಮಾಡಿ ತೋರಿಸುತ್ತದೆ. ಜತೆಗೆ ಇದು ವಾಸ್ತವಿಕಕ್ಕೆ ಭಿನ್ನವಾಗಿದೆ.

ಅಭಿವೃದ್ಧಿಶೀಲ ಸಮಾಜದಲ್ಲಿನ ನಗರ ಪ್ರದೇಶಗಳ ಸರಿಯಾದ ಮಾಹಿತಿಯಿಲ್ಲದವರು ಮಾತ್ರ ಈ ಕ್ರಮದ ವಿವರಣೆ ಕೊಡಲು ಸಾಧ್ಯ. ಏಕೆಂದರೆ ಗ್ರಾಮೀಣ ಪ್ರದೇಶದಂತೆ ನಗರ ಕೂಡಾ ಹಲವಾರು ವರ್ಗಗಳಾಗಿ (ಅದು ಜಾತಿಯ ನೆಲೆಯಲ್ಲಿರಬಹುದು ಅಥವಾ ಇತರ ಯಾವುದೇ ಆಧಾರದಲ್ಲಿರಬಹುದು) ವಿಂಗಡಣೆಗೆ ಒಳಪಟ್ಟಿವೆ ಮತ್ತು ಅಲ್ಲಿ ಕೂಡ ಕೆಳವರ್ಗ ಜೋಪಡಿ ಪಟ್ಟಿಯಲ್ಲಿ ನಮ್ಮ ಗ್ರಾಮೀಣ ಪ್ರದೇಶದ ದಲಿತರ ಜೀವನಕ್ಕೆ ಸರಿಗಟ್ಟುವ ಜೀವನ

ನಡೆಸುತ್ತಿದ್ದಾರೆ. ಅಂದರೆ: ನಗರ ಅಥವಾ ಗ್ರಾಮ ಎರಡೂ ಕಡೆ ವರ್ಗಭೇದಗಳಿವೆ, ಸಂಘರ್ಷಗಳಿವೆ, ಮತ್ತು ಸುಖ ದು:ಖಗಳಿವೆ. ಈ ಹಿನ್ನೆಲೆಯಲ್ಲಿ ಕೃಷಿ ಆಧಾರಿತ ಆರ್ಥಿಕ ಚಟುವಟಿಕೆಯುಳ್ಳ ಒಂದು ವ್ಯವಸ್ಥೆಯನ್ನು ಯಾವುದೇ ಲೋಪದೋಷಗಳೂ ಇಲ್ಲದ ಆದರ್ಶ ಪ್ರಾಯ ವ್ಯವಸ್ಥೆಯೆಂದು ವರ್ಣಿಸುವುದು ಸರಿಯಲ್ಲ. ಈ ವ್ಯವಸ್ಥೆಯಲ್ಲಿ ಕೂಡ ಭೂಮಿ ಕೆಲವರ ಸ್ವತ್ತಾಗಿದೆ. ಬಹುತೇಕ ಮಂದಿ ಕೃಷಿಕಾರ್ಮಿಕರಾಗಿ ಅಥವಾ ಇತರ ಸಾಂಪ್ರದಾಯಿಕ ಕಸಬುಗಾರಿಕೆಯ ಮೂಲಕ ತಮ್ಮ ಜೀವನವನ್ನು ಭರಿಸಬೇಕಾಗಿದೆ. ಆದರೆ, ಪರಿಸರ ನಾಶದ ಅಂಶವನ್ನು ಮನದಟ್ಟು ಮಾಡುವ ಭರದಲ್ಲಿ ಹಲವಾರು ವಿಚಾರಗಳು ಭವಿಷ್ಯದ ತೀರ್ಮಾನಕ್ಕಾಗಿ ಉಳಿದುಕೊಳ್ಳುತ್ತವೆ. ಉದಾಹರಣೆಗೆ ಉದ್ಯಮೀಕರಣವನ್ನು ಹೊರತು ಪಡಿಸಿದ ವ್ಯವಸ್ಥೆಯಲ್ಲಿ ಭೂಮಿ ಸಮುದಾಯದ ಒಡೆತನದಲ್ಲಿ ಇಲ್ಲದಿರುವುದು, ಖಾಸಗಿ ಒಡೆತನ ಸಹಜವಾಗುವುದು, ಬಹುತೇಕ ಮಂದಿ ಕಾರ್ಮಿಕರಾಗುವುದು ಮತ್ತು ಅವರು ಕನಿಷ್ಠ ಕೂಲಿಗಾಗಿ ದುಡಿಯುವುದು, ಇವೇ ಮುಂತಾದವುಗಳು ತಕ್ಷಣದಲ್ಲಿ ತೀರ್ಮಾನ ತೆಗೆದುಕೊಳ್ಳಬೇಕಾದ ವಿಚಾರಗಳಾಗುವುದಿಲ್ಲ. ತಕ್ಷಣಕ್ಕೆ ಆಗಬೇಕಾದ ತೀರ್ಮಾನವೆಂದರೆ: ನಾವೆಲ್ಲ ಅಂದರೆ ಜಾತಿ/ವರ್ಗಭೇದ ಮರೆತು ನಮ್ಮ ಪರಿಸರವನ್ನು ಉಳಿಸಿಕೊಳ್ಳುವುದು. ಒಂದು ಸುಂದರ ಪರಿಸರ ಉಳಿದ ಅನಂತರ ಅದರ ವಿಲೇವಾರಿಯ ಪ್ರಶ್ನೆ: ಇದನ್ನೇ ನಾವು ಸ್ವತಂತ್ರ ಹೋರಾಟದ ಸಂದರ್ಭದಲ್ಲಿ ಮಾಡಿದ್ದು. ಇದನ್ನೇ ನಾವು ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಮಾಡಿದ್ದು ಮತ್ತು ಇದನ್ನೇ ಪ್ರಚಲಿತದಲ್ಲಿರುವ ಪ್ರಾದೇಶಿಕ ಅನನ್ಯತೆಯ ಮೇಲೆ ಸ್ವತಂತ್ರ ಜಿಲ್ಲೆ ಅಥವಾ ರಾಜ್ಯ ಕೇಳುವ ನೇತಾರರು ಮಾಡುತ್ತಿರುವುದು.

## ಆಧುನೀಕರಣ ಮತ್ತು ಸಂಸ್ಕೃತಿ

ಪರಿಸರ ಚಳುವಳಿಗಳು ಉದ್ಯಮೀಕರಣವನ್ನು ವಿರೋಧಿಸುವಂತೆ ಕಂಡರೂ ಆಳದಲ್ಲಿ ಅವುಗಳು ಆಧುನೀಕರಣದ ವಿಫಲತೆಗೆ ಪ್ರತಿಕ್ರಿಯೆಗಳು ಕೂಡ ಆಗಿವೆ ಎಂದು ಈ ಹಿಂದೆ ಸೂಚಿಸಿದ್ದೇನೆ. ಉದ್ಯಮೀಕರಣವನ್ನು ಅಥವಾ ಆಧುನೀಕರಣವನ್ನು ವಿರೋಧಿಸುವ ಭರದಲ್ಲಿ ನಮ್ಮಲ್ಲಿ ಇಂದು ಬಂಡವಾಳಪೂರ್ವ ವ್ಯವಸ್ಥೆಯನ್ನು ಮತ್ತು ಅದರ ಸಂಸ್ಕೃತಿಯನ್ನು ವೈಭವೀಕರಿಸುವ ಪ್ರವೃತ್ತಿ ಪರಿಸರ ಚಳವಳಿಯ ವ್ಯಾಪ್ತಿಯೊಳಗೆ ತೂರಿಕೊಳ್ಳಲು ಪ್ರಯತ್ನಿಸುತ್ತಿದೆ. ನಮ್ಮ ಸಂಸ್ಕೃತಿಯನ್ನು ವೈಭವೀಕರಿಸುವುದು ತಪ್ಪಲ್ಲ. ಆದರೆ, ಇಂದಿನ ರಾಜಕೀಯ ಸಂದರ್ಭದಲ್ಲಿ `ಸಂಸ್ಕೃತಿ' ಎಂಬ ಪದದ ಬಳಕೆ ಅದರ ಸರಳ ವಿವರಣೆಯ ಮಿತಿಯಲ್ಲಿ ಉಳಿದಿಲ್ಲ. ಬದಲಿಗೆ `ಸಂಸ್ಕೃತಿ' ಒಂದು ರಾಜಕೀಯ ಅಸ್ತ್ರವಾಗಿದೆ. ಆಧುನೀಕರಣದ ವಿಫಲತೆಯನ್ನು ಪ್ರತಿಭಟಿಸುವಲ್ಲಿ ನಮ್ಮ `ಸಂಸ್ಕೃತಿ`ಯ ಪರಿಕಲ್ಪನೆಗೆ ಜೀವ ತುಂಬಿದವರು ಮತ್ತು ಅದನ್ನು ಒಂದು ರಾಜಕೀಯ ಅಸ್ತ್ರವಾಗಿ ಬಳಸಿದವರಲ್ಲಿ ಹಿಂದೂ ರಾಷ್ಟ್ರೀಯವಾದಿಗಳು ಪ್ರಮುಖರಾಗಿ ಕಾಣುತ್ತಾರೆ. ಅಂದರೆ: ನಮ್ಮ `ಸಂಸ್ಕೃತಿಯ' ಕಲ್ಪನೆಯನ್ನು ಹುಟ್ಟು ಹಾಕಿದವರು ಹಿಂದೂ ರಾಷ್ಟ್ರೀಯವಾದಿಗಳೆಂದು ತಿಳಿಯಬೇಕಾಗಿಲ್ಲ. ಈ ಹಿಂದೆ ವಿವರಿಸಿದಂತೆ ಪರದೇಶಿ

ಆಳ್ವಿಕೆಯನ್ನು ವಿರೋಧಿಸುವ ನೆಲೆಯಲ್ಲಿ ರೂಪುಗೊಂಡ ನಮ್ಮ `ಸಂಸ್ಕೃತಿ'ಯ ಕಲ್ಪನೆ ರಾಜಕೀಯ ಸ್ವಾತಂತ್ರ್ಯದ ಅನಂತರ ನಮ್ಮ ಮಧ್ಯಮ ವರ್ಗಕ್ಕೆ ಒಂದು ಸಂಕಷ್ಟದ ಸ್ಥಿತಿಯನ್ನು ತಂದಿತ್ತು. ಸ್ವತಂತ್ರ ಭಾರತ ಆರಂಭಿಸಿದ ತಾಂತ್ರಿಕ ಆಧುನೀಕರಣ ಮತ್ತು ನಮ್ಮ ` ಸಂಸ್ಕೃತಿ`ಯ ಪರಿಕಲ್ಪನೆ ಒಂದಕ್ಕೊಂದು ಪೂರಕವಾಗಿರಲಿಲ್ಲ. ಬದಲಾಗಿ ಅವುಗಳೆರಡರ ಮಧ್ಯೆ ಹಲವಾರು ತಾಕಲಾಟಗಳಿದ್ದುವು. ಈ ಭಿನ್ನತೆಯನ್ನು ಪಾರ್ಥ ಚಟರ್ಜಿಯ ಪ್ರಕಾರ `ಬೌದ್ಧಿಕ' ಮತ್ತು `ಭೌತಿಕ' ಎಂಬ ಎರಡು ಪ್ರಪಂಚ ಸೃಷ್ಟಿಸಿಕೊಳ್ಳುವ ಮೂಲಕ ಪರಿಹರಿಸಿಕೊಳ್ಳಲಾಯಿತು. ಇದು ಆಧುನೀಕರಣದ ಪ್ರಕ್ರಿಯೆಯಲ್ಲಿ ತೊಡಗಿಸಿ ಕೊಂಡವರು ಮತ್ತು ಆದರಿಂದ ಉದ್ಧಾರವಾಗಬಹುದೆಂದು ನಂಬಿದವರು ಮತ್ತು ಅದಕ್ಕಿಂತಲೂ ಮುಖ್ಯವಾಗಿ ಈ ಕ್ರಮದ `ಸಂಸ್ಕೃತಿಯ' ಕಲ್ಪನೆಯುಳ್ಳವರು ಮಾಡಿಕೊಂಡ ಮಾನಸಿಕ ಸಿದ್ಧತೆ ಇರಬಹುದು. ಆದರೆ, ಈ ದ್ವಂದ್ವತೆ ಯಾರಿಗೆ ಇದ್ದಿರಬಹುದು ಎನ್ನುವುದು ಮುಖ್ಯವಾಗುತ್ತದೆ. ಸಾಂಪ್ರದಾಯಿಕ ಸಮಾಜದ ಮೇಲ್‌ವರ್ಗದ `ಸಂಸ್ಕೃತಿ'ಯ ಕಲ್ಪನೆಯನ್ನು ನಮ್ಮ ಸಂಸ್ಕೃತಿಯ ಹಣೆಪಟ್ಟಿಯಲ್ಲಿ ಎಲ್ಲರ ಸಂಸ್ಕೃತಿ ಎಂದು ಪ್ರಚಾರ ಪಡಿಸುವುದರ ಮೂಲಕ ಅಂದರೆ: ಆಧುನೀಕತೆಗೆ ಹೊಂದಿಕೊಳ್ಳುವುದು ಒಂದು ದೊಡ್ಡ ಸಮಸ್ಯೆ ಎಂಬ ಚಿತ್ರಣ ಕೊಡಲಾಗಿತ್ತು. ಆದರೆ, ನಮ್ಮ ಸಮಾಜದಲ್ಲಿನ ಕೆಳವರ್ಗದವರ ದೃಷ್ಟಿಯಿಂದ ಈ ದ್ವಂದ್ವತೆ ಒಂದು ವಿಧದಲ್ಲಿ ಲಕ್ಸುರಿಯೇ ಸರಿ. ಏಕೆಂದರೆ ಅವರು ಆಧುನಿಕತೆಯನ್ನು ತಮ್ಮದಾಗಿಸಿಕೊಳ್ಳುವುದರಿಂದ ಕಳಕೊಳ್ಳಲು ಏನೂ ಉಳಿದಿರಲಿಲ್ಲ. ಆದಾಗ್ಯೂ ಈ ರೀತಿಯ ದ್ವಂದ್ವತೆ ನಮ್ಮ ಚರ್ಚೆಗಳಲ್ಲಿ ಕೇಂದ್ರಬಿಂದುವಾಗಿತ್ತು ಎನ್ನುವುದನ್ನು ನಾವು ಒಪ್ಪಲೇಬೇಕಾಗುತ್ತದೆ.

ಸ್ವಾತಂತ್ರ್ಯಾನಂತರ ಅನುಸರಿಸಿದ ತಾಂತ್ರಿಕ ಆಧುನೀಕರಣ ನಮ್ಮ ಸಾಂಪ್ರದಾಯಿಕ ಸಮಾಜದ ಮೇಲೆ ಯಾವ ಪ್ರಬಾವ ಬೀರಿತು ಎನ್ನುವುದರತ್ತ ಈಗ ಗಮನ ಹರಿಸೋಣ. ಬೃಹತ್ ಉದ್ಯಮಗಳು, ಆಣೆಕಟ್ಟುಗಳು, ಗಣಿಗಾರಿಕೆಗಳು, ರೈಲ್ವೆ ಮಾರ್ಗಗಳು ಮುಂತಾದವುಗಳು ಆಧುನೀಕರಣದ ನೆಲೆಗಟ್ಟನ್ನು ಭದ್ರಗೊಳಿಸಿವೆ ಮತ್ತು ನಮ್ಮ ಸಮಾಜದ ಸ್ವಲ್ಪ ಜನರಿಗೆ ನಗರ ಜೀವನದ ಅವಕಾಶವನ್ನು ಒದಗಿಸಿವೆ. ಈ ಹಿಂದೆ ವಿವರಿಸಿದಂತೆ ನಗರ ಜೀವನ ಎಂದ ಕೂಡಲೇ ಅದನ್ನು ಸಮಾನತೆ ಸಾಧ್ಯತೆಯುಳ್ಳ ಒಂದು ಸಮುದಾಯವಾಗಿ ಕಲ್ಪಿಸಿಕೊಳ್ಳುವ ಅಗತ್ಯವಿಲ್ಲ. ಅಲ್ಲಿ ಬಹುತೇಕ ಸಂದರ್ಭದಲ್ಲಿ ನಮ್ಮ ಸಾಂಪ್ರದಾಯಿಕ ವ್ಯವಸ್ಥೆಯ ಬಲಾಢ್ಯರು ತಮ್ಮ ಕೃಷಿಯಿಂದ ಅಥವಾ ಭೂಮಿಯ ಒಡೆತನದಿಂದ ಗಳಿಸಿದ ಸಂಪತ್ತಿನ ವಿನಿಯೋಜನೆಯಿಂದ ಉದ್ಯಮದ ಮಾಲೀಕರಾಗಿರುವ ನಿದರ್ಶನಗಳು ಧಾರಾಳವಾಗಿವೆ. ಜತೆಗೆ ಇದೇ ಸಾಂಪ್ರದಾಯಿಕ ಅಥವಾ ಗ್ರಾಮೀಣ ವ್ಯವಸ್ಥೆಯಿಂದ ವಲಸೆ ಹೋಗುವ ಮಂದಿ ಸಾಂಪ್ರದಾಯಿಕ ವ್ಯವಸ್ಥೆಯ ಸಮಾಜದಲ್ಲಿನ ಸ್ಥಿತಿಯನ್ನು ನಗರದಲ್ಲಿ ಜೀವನ ಆರಂಭಿಸಿದ ಕೂಡಲೇ ಕಳಕೊಳ್ಳುವುದಿಲ್ಲ. ಬದಲಿಗೆ ಗ್ರಾಮೀಣ ಬಡಬಗ್ಗರು ಜೋಪಡಿಗಳಲ್ಲಿ ತಮ್ಮ ಬದುಕನ್ನು ಆರಂಭಿಸಿದರೆ ಅದೇ ಗ್ರಾಮದ ಅನುಕೂಲಸ್ಥ ನಗರದ ಮಧ್ಯಮ/ಶ್ರೀಮಂತ ಬಡಾವಣೆಗಳಲ್ಲಿ ಜೀವನ ಆರಂಭಿಸುವ ಸಾಧ್ಯತೆ ಹೆಚ್ಚು. ಇನ್ನು ತಾಂತ್ರಿಕ ಆಧುನೀಕರಣದ ಪ್ರಕ್ರಿಯೆಯಿಂದ ಆದ ಪರಿಣಾಮಗಳನ್ನು ಗಮನಿಸೋಣ. ಇದರ ಪರಿಣಾಮ ಕೆಲವರಿಗೆ ತುಂಬಾ ನಿಧಾನ ಗತಿಯಲ್ಲಿ ಅನುಭವವಾದರೆ

ಇನ್ನು ಕೆಲವರಿಗೆ ಸಮುದ್ರದ ಅಲೆಯಂತೆ ಅಪ್ಪಳಿಸಿ ಅವರ ಅಡಿಪಾಯವನ್ನೇ ಬುಡಮೇಲು ಮಾಡಿದ ಅನುಭವ. ಅಣೆಕಟ್ಟು, ರೈಲ್ವೆ ಮಾರ್ಗ, ನಿರ್ಮಾಣ, ಡಿಫೆನ್ಸ್ ಉದ್ದೇಶಕ್ಕಾಗಿ ಅಥವಾ ಬೃಹತ್ ಉದ್ಯಮಗಳಿಗೆ ಭೂಮಿ ಬಳಕೆ ಮುಂತಾದವುಗಳಿಂದ ನೆಲ ಕಳಕೊಂಡವರ ನೋವು ಕಣ್ಣಿಗೆ ರಾಚುವಂತೆ ಬೆಳಕಿಗೆ ಬಂದಿದೆ. ಆದರೆ, ಸಾಂಪ್ರದಾಯಿಕ ಕಸುಬುದಾರಿಕೆಯಲ್ಲಿ ತೊಡಗಿಸಿಕೊಂಡವರನ್ನು ಆಧುನಿಕ ಉದ್ಯಮೀಕರಣ ನಿಧಾನಗತಿಯಲ್ಲಿ ಬೀದಿಪಾಲು ಮಾಡಿದೆ. ತಮ್ಮ ಕಸುಬುದಾರಿಕೆಯ ವಿನಾಶಕ್ಕೆ ಬದಲಾಗಿ ಅವರಿಗೆ ದೊರಕಿದ್ದು ನಗರ ಪ್ರದೇಶಗಳಲ್ಲಿ ಕಾರ್ಮಿಕರಾಗುವುದು. ಇಲ್ಲಿ ಕೂಡ ಈ ರೀತಿಯ ಅತಂತ್ರ ಜನರು ನಗರ ಪ್ರದೇಶದ ತಳಭಾಗದಲ್ಲಿರುವ ಕೊಳಚೆ ಪ್ರದೇಶಗಳಲ್ಲಿ ತಮ್ಮ ವಾಸ್ತವ್ಯ ಕಂಡುಕೊಳ್ಳುವುದು, ಹೊಟ್ಟೆಪಾಡಿಗಾಗಿ ಅಸಂಘಟಿತ ಕಾರ್ಮಿಕರಾಗಿ ದುಡಿಸಿಕೊಳ್ಳುವುದು ಬಿಟ್ಟರೆ ಬೇರೆ ದಾರಿಯಿಲ್ಲ. ಇನ್ನು ತಾಂತ್ರಿಕ ಆಧುನೀಕರಣದೊಂದಿಗೆ ಬಂದ ಆಧುನಿಕ ರಾಜಕೀಯ, ಶಿಕ್ಷಣ, ಕಾನೂನು ಮುಂತಾದ ವ್ಯವಸ್ಥೆಗಳು ಮೂಲಭೂತ ಪರಿವರ್ತನೆಯ ಸಾಧನಗಳಾಗುವ ಸಾಧ್ಯತೆಗಳು ತುಂಬಾ ಕಡಿಮೆ. ಈ ಸಂಸ್ಥೆಗಳಲ್ಲಿ ಸಾಂಪ್ರದಾಯಿಕ ಸಮಾಜದ ಮೇಲ್‌ವರ್ಗದವರು ಗಣನೀಯ ಪ್ರಮಾಣದಲ್ಲಿ ತೂರಿಕೊಳ್ಳುವ ಸಂಭವವುಂಟು. ಈ ಸಂಸ್ಥೆಗಳು ತಾಂತ್ರಿಕ ಆಧುನೀಕರಣ ಹುಟ್ಟುಹಾಕುವ ಅಸಮಾನತೆಯ ಪರಿಣಾಮಗಳನ್ನು ಕಡಿಮೆಗೊಳಿಸುವುದಿಲ್ಲ. ಅದರ ಬದಲು ಬಹುತೇಕ ಸಂದರ್ಭಗಳಲ್ಲಿ ತೇಪೆ ಹಚ್ಚುವ ಕೆಲಸವನ್ನೆ ಮಾಡಿವೆ. ಅಂದರೆ ಆಧುನಿಕತೆಯು ಸಾಂಪ್ರದಾಯಿಕ ಸಮಾಜದ ಅರ್ಥ, ಗುರುತು, ಅಸಮಾನತೆಗಳನ್ನು ಪರಿಪೂರ್ಣವಾಗಿ ಪರಿವರ್ತಿಸುತ್ತದೆ ಎನ್ನುವ ನೆಹರೂ ಅವರ ಸೆಕ್ಯುಲರಿಸಂನ ಗೃಹೀತಗಳು ಸಫಲಗೊಳ್ಳಲಿಲ್ಲ.

ಈ ಕ್ರಮದ ಆಧುನೀಕರಣವನ್ನು ಪ್ರತಿಭಟಿಸುವಲ್ಲಿ ನಮ್ಮ ಸಂಸ್ಕೃತಿಯ ಕಲ್ಪನೆಯನ್ನು ಪುನರುಜ್ಜೀವನಗೊಳಿಸಲಾಗಿದೆ. ಈ ಮಾತನ್ನು ಹೇಳುವಾಗ ಕೆಲವೊಂದು ಬೆಳವಣಿಗೆಗಳ ಬಗೆಗಿನ ಸ್ಥೂಲ ಚಿತ್ರಣ ಅಗತ್ಯವಿದೆ. ಉದಾಹರಣೆಗೆ ಎಂಬತ್ತರ ದಶಕದಲ್ಲಿ ಕಂಡು ಬಂದ ಹಲವಾರು ಘಟನೆಗಳು ನಮ್ಮ ಆಧುನೀಕರಣ ಅಭಿವ್ಯಕ್ತಗೊಳ್ಳುವ ವಿಧಾನ ಮತ್ತು ಆ ಪ್ರಕ್ರಿಯೆಯಲ್ಲಿ ಸಂಪ್ರದಾಯದೊಂದಿಗಿನ ತಾಕಲಾಟಗಳನ್ನು ಬೆಳಕಿಗೆ ತರುವ ಕೆಲಸವನ್ನು ಮಾಡಿವೆ. ಉದಾಹರಣೆಗೆ ಶಾಹಬಾನು ಪ್ರಕರಣ ಅಥವಾ ರೂಪ ಕನ್ವರ್ ಘಟನೆಗಳನ್ನು ತೆಗೆದುಕೊಳ್ಳಬಹುದು. ಈ ಘಟನೆಗಳು ಎಲ್ಲವನ್ನು ಸಮನ್ವಯಗೊಳಿಸುವ ಆಧುನೀಕರಣದ ಪ್ರಯತ್ನವನ್ನು ಪ್ರಶ್ನಿಸುವ ಅಥವಾ ಅದರಿಂದ ಹುಟ್ಟಿಕೊಳ್ಳುವ ಹೊಸ ಸಮಸ್ಯೆಗಳತ್ತ ಬೊಟ್ಟುಮಾಡಿ ತೋರಿಸಿವೆ. ಇಲ್ಲಿ ಹಲವಾರು ಪ್ರಮುಖ ಪ್ರಶ್ನೆಗಳು ಬೆಳಕಿಗೆ ಬಂದಿವೆ. ಪ್ರತಿ ಸಮುದಾಯದ ಸಾಂಸ್ಕೃತಿಕ ಅನನ್ಯತೆ ಅಥವಾ ಅದರ ಮುಂದುವರಿಕೆಯ ಪ್ರಶ್ನೆ, ಪೂರ್ವದ ಪ್ರತಿಯೊಂದನ್ನು ವಿಮರ್ಶೆಗೆ ಒಡ್ಡಬೇಕೆನ್ನುವ ಆಧುನೀಕರಣದ ಪ್ರತಿಪಾದನೆ ಮತ್ತು ಅದನ್ನು ಪ್ರತಿಭಟಿಸುವುದು ಈ ಹಂತದಲ್ಲಿ ಬೆಳಕಿಗೆ ಬಂದಿವೆ. ನೆಹರೂ ಅವರ ಆಧುನಿಕತೆಯ ಗ್ರಹಿಕೆಯ ಆಧಾರದಲ್ಲಿ ಈ ಪ್ರಶ್ನೆಗಳಿಗೆ ಒಂದು ಬಗೆಯ ಪರಿಹಾರವನ್ನು ಈ ಹಿಂದೆ ಕಂಡು ಕೊಳ್ಳಲಾಗಿತ್ತು. ಆದರೆ, ನಂತರದ ದಿನಗಳಲ್ಲಿ ಸಾಂಪ್ರದಾಯಿಕ ಸಮಾಜದ ಅರ್ಥ, ಗುರುತು, ಅನನ್ಯತೆಗಳು ಕರಗಿಹೋಗುವ ಬದಲು ಹೆಚ್ಚು ಹಚ್ಚು ಬಲಗೊಳ್ಳತೊಡಗಿದವು. ಇಲ್ಲಿ ಹಿಂದೂ

ರಾಷ್ಟ್ರೀಯವಾದಿಗಳ ರಾಜಕೀಯವು ಮೇಲ್ನೋಟಕ್ಕೆ ಎದ್ದುಕಾಣುವ ಅಂಶವಾಗುತ್ತದೆ. ಆದರೆ ಅದು ಅಷ್ಟೆ ಆಗಿರಲಿಕ್ಕಿಲ್ಲ. ಬಹು ಮುಖ್ಯವಾದ ಮತ್ತೊಂದು ಅಂಶವೆಂದರೆ ಆಧುನೀಕರಣದ ವಿಫಲತೆ. ಜತೆಗೆ ಆಧುನೀಕರಣದಿಂದ ನೋವನ್ನು ಉಂಡವರಿಗೆ, ಭೂಮಿ ಕಳಕೊಂಡವರಿಗೆ, ನಗರ ಜೀವನದಲ್ಲಿ ತಾಂತ್ರಿಕ ಆಧುನೀಕರಣದ ಸಂಸ್ಕೃತಿಗೆ ಒಗ್ಗಿಕೊಳ್ಳಲು ಕಷ್ಟಪಡುವವರಿಗೆ ಇನ್ನೂ ಮುಂತಾದವರಿಗೆ ಆಪ್ಯಾಯಮಾನವಾಗುವ ರೀತಿಯಲ್ಲಿ ಸಂಸ್ಕೃತಿಯ ಪರಿಕಲ್ಪನೆಯು ಅಭಿವ್ಯಕ್ತಗೊಂಡಿದೆ. ಆದುದರಿಂದಲೇ ನಮ್ಮ ಸಂಸ್ಕೃತಿಯ ಬೇರುಗಳನ್ನು ಹುಡುಕಬೇಕು, ಅದರಲ್ಲಿ ಸತ್ಯವಿದೆ, ಅದರಲ್ಲೂ ಅರ್ಥವಿದೆ ಎಂಬ ಮಾತುಗಳು ಇಂದು ಬುದ್ಧಿಜೀವಿಗಳಿಂದ ಹಿಡಿದು ಹಿಂದೂರಾಷ್ಟ್ರೀಯವಾದಿಗಳೆಂದು ಗುರುತಿಸಬಹುದಾದ ಜನರ ವರೆಗೂ ಕೇಳಿಬರುತ್ತಿವೆ. ಆದರೆ, ಈ ಕ್ರಮದ ವಿವರಣೆಗಳು ಬಹುತೇಕ ಸಂದರ್ಭಗಳಲ್ಲಿ ನಮ್ಮ ಸಂಸ್ಕೃತಿಯ ಕಲ್ಪನೆಯನ್ನು ಎಲ್ಲರಿಗೂ ಏಕರೀತಿಯಲ್ಲಿ ಅನ್ವಯವಾಗುವ ಮತ್ತು ಏಕರೀತಿಯಲ್ಲಿ ಅನುಸರಿಸಲ್ಪಡುವ ಒಂದು ವಿರಾಟ್‌ರೂಪದ ಪರಿಕಲ್ಪನೆಗೆ ಒತ್ತುಕೊಡುತ್ತವೆ. ಒಂದು ವಿಧದಲ್ಲಿ ಈ ಕಲ್ಪನೆಯೆ ಅವಾಸ್ತವಿಕ. ಜೊತೆಗೆ ಇದು ಒಂದು ಉದ್ದೇಶಪೂರಿತ ಕಟ್ಟುವಿಕೆ. ಇದು ಪಶ್ಚಿಮದ ಉದ್ಯಮೀಕರಣಕ್ಕೆ ಪ್ರತಿಕ್ರಿಯೆಯಾಗಿ ರೂಪುಗೊಂಡದ್ದು. ಆ ಕಾರಣಕ್ಕಾಗಿ ಇದರ ಪರಿಣಾಮ ಅಷ್ಟಕ್ಕೆ ಸೀಮಿತವಾಗಬೇಕೆಂದಿಲ್ಲ. ಪಶ್ಚಿಮದ ಉದಾರವಾದೀ ವಿಚಾರಗಳಾದ - ಸಮಾನತೆ, ವೈಚಾರಿಕ ಪ್ರಶ್ನೆಗಾರಿಕೆ, ವೈಯಕ್ತಿಕ ಅರ್ಹತೆಗಳಿಂದ ಹೊಸ ಆದರ್ಶಗಳಿಗೆ ಪ್ರಯತ್ನಿಸುವುದು ಕೂಡ ಇಲ್ಲಿ ಅಪರಾಧವಾಗಬಹುದು. ಆಧುನೀಕರಣ ಪರಂಪರೆಯತ್ತ ವಿಮರ್ಶಾತ್ಮಕ ದೃಷ್ಟಿಹರಿಸಲು ಅವಕಾಶ ಮಾಡಿಕೊಡುತ್ತದೆ. ಆದರೆ ರಾಷ್ಟ್ರೀಯವಾದಿ ಸಾಂಸ್ಕೃತಿಕ ರಾಜಕೀಯವು ಗತಕಾಲವನ್ನು ವೈಭವೀಕರಿಸುತ್ತ, ದೇಶಿಯವಾದದ್ದು, ಭಾರತೀಯವಾದದ್ದು ಎಲ್ಲವನ್ನು ಸಮರ್ಥಿಸಿಕೊಳ್ಳಲೇಬೇಕೆಂದು ಒತ್ತಾಯಿಸತೊಡಗಿವೆ. ಹೀಗಾಗಿ, ಸಾಂಪ್ರದಾಯಿಕ ಆಚರಣೆಗಳನ್ನು ಪ್ರಶ್ನಿಸುವ ಎಲ್ಲಾ ಪ್ರಯತ್ನಗಳೂ ಪಶ್ಚಿಮದ್ದು ಆದ್ದರಿಂದ ರಾಷ್ಟ್ರವಿರೋಧಿ ಎಂದು ಖಂಡಿಸುವ, ತಿರಸ್ಕರಿಸುವ ರೂಢಿ ಬೆಳೆಯುತ್ತಿವೆ.

## ಪರಿಸರ ಮತ್ತು ಸಂಸ್ಕೃತಿ ವ್ಯಾಖ್ಯೆ

ಪರಿಸರ ಸಂಬಂಧಿತ ಚಳುವಳಿಗಳ ಸಂದರ್ಭದಲ್ಲಿ `ನಮ್ಮ ಸಂಸ್ಕೃತಿ' ಪದದ ಬಳಕೆ ಮೇಲಿನಂತೆಯೇ ಆಗಿದೆ ಎಂದು ಹೇಳಲು ಸಾಧ್ಯವಿಲ್ಲ. ಹಿಂದುತ್ವವಾದಿಗಳು ಸಂಸ್ಕೃತಿಯನ್ನು ಒಂದು ಸಮನ್ವಯದ ಕಲ್ಪನೆಯಲ್ಲಿ ಬಳಸಿದ್ದಾರೆ. ಆದರೆ ಇಲ್ಲಿ `ನಮ್ಮ ಸಂಸ್ಕೃತಿ' ಸ್ಥಳೀಯ ರೂಪದಲ್ಲಿ ವ್ಯಾಖ್ಯಾನಿಸಲ್ಪಡುತ್ತದೆ. ಇವರ ಪ್ರಕಾರ `ನಮ್ಮ ಸಂಸ್ಕೃತಿ' ನಾಶವಾಗುತ್ತಿದೆ ಎಂದರೆ ಪರಿಸರ ನಾಶವಾಗುವ ಪ್ರದೇಶದ ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಕೆಯಾಗುತ್ತದೆ. ಇದು ಯಾವುದೇ ಒಂದು ಸಮುದಾಯದ ಸಂಸ್ಕೃತಿ ಕುರಿತಂತೆ ಇರುವುದಿಲ್ಲ. ಜತೆಗೆ ಇವರ ಸಂಸ್ಕೃತಿಯ ವ್ಯಾಖ್ಯಾನ ಕೂಡ ವಿಚಿತ್ರವಾಗಿದೆ. ಸಂಸ್ಕೃತಿ ಎಂದರೆ ಸ್ವತಂತ್ರ, ಉಚ್ಚಮಟ್ಟದ್ದು, ನಮ್ಮ ಬದುಕಿನ ಇತರ ವ್ಯವಹಾರಗಳಿಂತ ಭಿನ್ನ, ಆದುದರಿಂದ ಅದಕ್ಕೆ ಯಜಮಾನಿಕೆಯ ಸ್ಥಾನ ಕೊಡಬೇಕು ಎನ್ನುವ ಕ್ರಮ ಬೆಳೆದು ಬಂದಿದೆ. ವಾಸ್ತವಿಕದಲ್ಲಿ ಇದು ಒಂದು ಕಟ್ಟುವಿಕೆ.

ಇವರ ಸಂಸ್ಕೃತಿ ವ್ಯಾಖ್ಯಾನದಲ್ಲಿ ಎರಡು ರೀತಿಯ ಸಂಸ್ಕೃತಿಗಳಿವೆ. ಒಂದು ಜನಸಾಮಾನ್ಯರ ಹೊಟ್ಟೆಪಾಡಿನ ವ್ಯವಹಾರಗಳನ್ನು ಒಳಗೊಳ್ಳುವಂಥದು, ಮತ್ತೊಂದು ಕಲೆ, ಸಾಹಿತ್ಯ, ಸಂಗೀತ, ದೈವ, ಆಚರಣೆ ಮುಂತಾದ ಬೌದ್ಧಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು. ಈ ರೀತಿಯಲ್ಲಿ ಸಂಸ್ಕೃತಿಯ ಎರಡು ಬೇರೆ ಬೇರೆ ಸ್ವತಂತ್ರ ಕ್ಷೇತ್ರಗಳನ್ನು ಗುರುತಿಸುವ ಮೂಲಕ ಎರಡರ ಮಧ್ಯೆ ಇರುವ ಸಂಬಂಧ ಅಸ್ಪಷ್ಟಗೊಳ್ಳುತ್ತದೆ. ಈ ಸಂಸ್ಕೃತಿ ವಿವರಣೆಯನ್ನು ಮಾಡುವವರು ಮತ್ತು ಅದನ್ನು ಉಳಿಸಿಕೊಳ್ಳಬೇಕು ಎನ್ನುವವರು ಬೌದ್ಧಿಕ ಕ್ಷೇತ್ರದಲ್ಲಿ ಕೆಲಸ ಮಾಡುವವರು ಆಗಿರುತ್ತಾರೆ. ಅವರಿಗೆ ಅದಕ್ಕೆ ಬೇಕಾದ ಬಿಡುವು ಮತ್ತು ಅನುಕೂಲವನ್ನು ಒದಗಿಸಲು ಇತರರು ದುಡಿಯಬೇಕಾಗುತ್ತದೆ. ಸಂಸ್ಕೃತಿವಾದಿಗಳ ವಾದಗಳು ಈ ದುಡಿಯುವ ವರ್ಗಗಳ ಆಶೋತ್ತರಗಳನ್ನು ಎಷ್ಟರಮಟ್ಟಿಗೆ ಬಿಂಬಿಸುತ್ತವೆ ಎನ್ನುವುದು ಇಲ್ಲಿ ಮುಖ್ಯವಾಗಿದೆ. ವಾಸ್ತವದಲ್ಲಿ ಸಂಸ್ಕೃತಿ ಈ ರೀತಿ ಇರುವುದಿಲ್ಲ. ಉತ್ಪಾದನಾ ವ್ಯವಸ್ಥೆ ಮತ್ತು ಸಂಬಂಧಗಳು ಮತ್ತು ಸಂಸ್ಕೃತಿ ಪರಸ್ಪರ ಸಂಬಂಧಿಸಿವೆ. ಒಂದರಲ್ಲಿ ಆಗುವ ಪರಿವರ್ತನೆಗಳು, ಅದು ಸಂಸ್ಕೃತಿಯಲ್ಲಿ ಇರಬಹುದು ಅಥವಾ ಇತರ ಕ್ಷೇತ್ರಗಳಲ್ಲಿ ಇರಬಹುದು, ಮತ್ತೊಂದರ ಮೇಲೆ ಪರಿಣಾಮ ಬೀರುತ್ತದೆ. ಈ ಅರ್ಥದಲ್ಲಿ `ಸಂಸ್ಕೃತಿ ' ಎಂದೂ ವಿನಾಶವಾಗುವುದು ಸಾಧ್ಯವಿಲ್ಲ. ಅದು ಬದಲಾವಣೆ ಹೊಂದುತ್ತಿರುತ್ತದೆ.

ಸಂಸ್ಕೃತಿಯ ಒಳಿತು ಕೆಡುಕುಗಳ ಬಗ್ಗೆ ತೀರ್ಮಾನ ತೆಗೆದುಕೊಳ್ಳಲು ಇವರುಗಳು ತೆಗೆದುಕೊಳ್ಳುವ ಕಾಲಮಿತಿ ಕೂಡ ಪ್ರಶ್ನಾರ್ಹವೇ. `ನಮ್ಮ ಸಂಸ್ಕೃತಿ' ನಾಶವಾಗುತ್ತಿದೆ ಎನ್ನುವವರು ಮಾನವ ಜನಾಂಗದ ಇಡೀ ಇತಿಹಾಸವನ್ನು ಗಮನದಲ್ಲಿಟ್ಟುಕೊಂಡು ಆಡುವ ಮಾತುಗಳು ಇವಲ್ಲ. ಇಲ್ಲಿ ಚರಿತ್ರೆ ಎಂದರೆ ಬರೆಯುವ ವ್ಯಕ್ತಿಯ ಬಾಲ್ಯ ಮತ್ತು ಮುಪ್ಪು ಅಥವಾ ಇತ್ತೀಚಿನ ದಶಕಗಳಲ್ಲಿ ನಡೆಯುತ್ತಿರುವ ಆಧುನೀಕರಣ ಮತ್ತು ಅದರಿಂದ ಫಲಿತವಾದ ಪರಿವರ್ತನೆಗಳು. ಆದರೆ, ಒಂದು ಸಂಸ್ಕೃತಿ ಹಾಳಾಗುತ್ತಿದೆ ಅಥವಾ ಉದ್ಧಾರವಾಗುತ್ತಿದೆ ಎನ್ನಲು ಇಷ್ಟು ಅಲ್ಪಕಾಲ ವ್ಯಾಪ್ತಿಯ ಚೌಕಟ್ಟು ಸಾಕಾಗುವುದಿಲ್ಲ. ಇಡೀ ಸಮುದಾಯದ ಭೂತ ಮತ್ತು ವರ್ತಮಾನದ ಹೋಲಿಕೆ ಅಥವಾ ಮಾನವ ನಡೆದು ಬಂದ ಚರಿತ್ರೆಯ ಕಿರು ಪರಿಚಯವಾದರೂ ಅಗತ್ಯ. ಪ್ರತಿಯೊಬ್ಬ ವ್ಯಕ್ತಿ ಕೂಡ ತನ್ನ ಜೀವನದ ಹಲವಾರು ಮಜಲುಗಳನ್ನು ದಾಟಿ ಬರುವಾಗ ಹಲವು ರೀತಿಯ ಅನುಭವಗಳು ಸಾಧ್ಯ ಮತ್ತು ಕಳಕೊಂಡ, ಗಳಿಸಿದ ನೋವು ನಲಿವುಗಳು ಅನಿವಾರ್ಯ. ಅಂದ ಮಾತ್ರಕ್ಕೆ ಬಾಲ್ಯ ಸರಿ ಯೌವನ ತಪ್ಪು ಅಥವಾ ಯೌವನ ಸರಿ ಮುಪ್ಪು ತಪ್ಪು ಎಂದು ಹೇಳಲಾಗುವುದಿಲ್ಲ. ಮಾನವ ಜನಾಂಗದ ಇತಿಹಾಸವನ್ನು ಗಮನಿಸಿದರೆ ಇಂದು ನಾವು ಏನನ್ನು ಸರಿಯಲ್ಲ, ನಮ್ಮ ಸಂಸ್ಕೃತಿಯ ನಾಶಕ್ಕಾಗಿ ಬಂದಿವೆ ಎನ್ನುವಂತವುಗಳು ಸಹಜ ಮತ್ತು ಅನಿವಾರ್ಯ ಬೆಳವಣಿಗೆಗಳಾಗಿವೆ. ಗವಿಯಲ್ಲಿದ್ದುಕೊಂಡು ಕಾಡು ಪ್ರಾಣಿಗಳನ್ನು ಬೇಟೆಯಾಡಿ ಜೀವಿಸುವಲ್ಲಿಂದ ಕೃಷಿ ಪ್ರಧಾನ ಅರ್ಥವ್ಯವಸ್ಥೆಗೆ ಒಗ್ಗಿಕೊಳ್ಳುವುದು ಸಾಮಾನ್ಯ ಪರಿವರ್ತನೆಯೆ? ಆ ಹಂತದಲ್ಲಿ ಆದ ಸಾಂಸ್ಕೃತಿಕ ಪರಿವರ್ತನೆಗಳು ಸಾಮಾನ್ಯವಾದುವೇ? ಬೇಕು ಬೇಕಾದವರ ಸಂಗ ಮಾಡಬಹುದಾದ ಸ್ಥಿತಿಯಿಂದ ಕೇವಲ ಒಬ್ಬ ಪುರುಷ ಅಥವಾ ಸ್ತ್ರೀಯೊಂದಿಗೆ ಬದುಕಬೇಕಾದ ಸ್ಥಿತಿ, ಅಲೆಮಾರಿ

ಜೀವನದಿಂದ, ಕೃಷಿಗಾಗಿ, ನಿಂತ ನೀರಿನಂತೆ ಒಂದೇ ಸ್ಥಳದಲ್ಲಿ ತಳವೂರಬೇಕಾದ ಅನಿವಾರ್ಯತೆ, ಹಸಿವೆಯಾದಾಗ ಬೇಟೆಯಾಡಿ ತಿನ್ನುವಲ್ಲಿಂದ ಬೆಳೆದು ಸಂಗ್ರಹ ಮಾಡಿ ತಿನ್ನುವುದು, ಇವೇ ಮುಂತಾದವುಗಳು ಸಾಮಾನ್ಯ ಪರಿವರ್ತನೆಗಳೆ? ಇಂದಿನ ರೀತಿಯಲ್ಲಿ ಅಂದು ಓದು ಬರೆಹ ಮತ್ತು ಪ್ರಸಾರಮಾಧ್ಯಮಗಳಿದ್ದರೆ ಅಂದಿನ ಮಾನವ ಕೃಷಿಯಿಂದ ತನ್ನ ಸಂಸ್ಕೃತಿ ನಾಶವಾಗುತ್ತಿದೆ ಎಂದು ಕೂಗು ಹಾಕುತ್ತಿದ್ದ. ಪಾಪ ಆತನಿಗೆ ಅಂತಹ ಅನುಕೂಲಗಳಿರಲಿಲ್ಲ. ಆದುದರಿಂದ ಆತನ ನೋವುಗಳು ದಾಖಲಾಗಲಿಲ್ಲ. ದಾಖಲಾಗುತ್ತಿದ್ದರೆ ದೊಡ್ಡ ಬದಲಾವಣೆಗಳು ಇರುತ್ತಿತ್ತೇ ಎನ್ನುವುದು ಬೇರೆ ಪ್ರಶ್ನೆ. ಪರಿವರ್ತನೆಗಳು ಅನಿವಾರ್ಯ ಮತ್ತು ನಿರಂತರ. ಉದ್ಯಮೀಕರಣದ ಸಂದರ್ಭದಲ್ಲಿ ಕೃಷಿ ಉತ್ಪಾದನಾ ವ್ಯವಸ್ಥೆಯ ಆಚಾರ-ವಿಚಾರಗಳು ಬದಲಾಗುವುದು ಅನಿವಾರ್ಯ.

ಸ್ವತಂತ್ರ ಭಾರತ ತನ್ನ ಸಾಮಾಜಿಕ ಹಾಗೂ ಆರ್ಥಿಕ ರಚನೆಗಳಲ್ಲಿ ಮೂಲಭೂತ ಬದಲಾವಣೆ ತರುವ ಉದ್ದೇಶದಿಂದ ಆಧುನೀಕರಣ ಪ್ರಕ್ರಿಯೆಯನ್ನು ಆರಂಭಿಸಿತು. ಇಲ್ಲಿ ಎರಡು ಬಗೆಯ ಗೃಹೀತಗಳಿದ್ದವು; ಒಂದು ಸ್ವಾತಂತ್ರ್ಯಪೂರ್ವ ವ್ಯವಸ್ಥೆ ಸಮಾನತೆಯ ಸಮಾಜವಾಗಿರಲಿಲ್ಲ. ಆದುದರಿಂದ ಅದನ್ನು ಬದಲಾಯಿಸುವುದು ಅಗತ್ಯ. ಎರಡು, ಈ ಪರಿವರ್ತನೆ ಆಧುನೀಕರಣ ಪ್ರಕ್ರಿಯಿಂದ ಸಾಧ್ಯ. ಯೋಜಿತ ಅಭಿವೃದ್ಧಿಯ ಆರಂಭದ ದಿನಗಳಲ್ಲಿ ಸಾಂಸ್ಥಿಕ ರಚನೆಗಳ ಪರಿವರ್ತನೆ ಬಗ್ಗೆ ತೋರಿಕೆಯ ಕಾಳಜಿಯಾದರೂ ಇತ್ತು. ಆದರೆ ಬರಬರುತ್ತಾ ಆರ್ಥಿಕ ಆಭಿವೃದ್ಧಿ ನಮ್ಮ ಎಲ್ಲಾ ಸಮಸ್ಯೆಗಳಿಗೆ ಪರಿಹಾರವಾದೀತು ಎನ್ನುವ ಗೃಹೀತವು ಬಲವಾಯಿತು. ಅನಂತರದ ದಿನಗಳಲ್ಲಿ ಬಂಡವಾಳದ ಕ್ರೋಡೀಕರಣ, ಯಾವ ವಲಯದಲ್ಲಿ ಎಷ್ಟು ವಿನಿಯೋಜನೆ, ಉದ್ಯಮೀಕರಣ, ಕೃಷಿಯ ಆಧುನೀಕರಣ, ಮುಂತಾಗವುಗಳು ಅಭಿವೃದ್ಧಿಯ ಮುಖ್ಯ ಅಂಶಗಳಾದವು. ಆರ್ಥಿಕ ಅಭಿವೃದ್ಧಿಯೊಂದಿಗೆ ಸಾಂಪ್ರದಾಯಿಕ ಸಮಾಜದ ಸಾಂಸ್ಥಿಕ ರಚನೆಗಳು, ಗುರುತುಗಳು, ಅರ್ಥಗಳು ಕರಗಿ ಹೋಗುತ್ತವೆ ಎಂದು ತಿಳಿಯಲಾಗಿತ್ತು. ಆದರೆ ಆ ರೀತಿ ಆಗಲಿಲ್ಲ. ಇದಕ್ಕೆ ಹಲವಾರು ಕಾರಣಗಳಿರಬಹುದು. ಮುಖ್ಯವಾಗಿ ಕಣ್ಣಿಗೆ ಬೀಳುವುದು ಆಧುನೀಕರಣವನ್ನು ತಾಂತ್ರಿಕ ಆಧುನೀಕರಣಕ್ಕೆ ಸೀಮಿತಗೊಳಿಸಿದ್ದು ಮತ್ತು ಅದರ ವಿಫಲತೆ. ಎರಡನೆಯದಾಗಿ ಲಿಬರಲ್ ಮಾಡರ್ನಿಟಿಗೆ ಮಹತ್ವ ಕೊಡದಿರುವುದು. ನಮ್ಮಲ್ಲಿ ತಾಂತ್ರಿಕ ಆಧುನೀಕರಣ ಇನ್ನು ಸರಿಯಾಗಿ ರೂಪುಗೊಳ್ಳುವ ಮೊದಲೇ ಅದರ ವಿರುದ್ಧ ಪ್ರತಿಭಟನೆಗಳು ಜಾಗ್ರತವಾಗಿವೆ. ಈ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳಬೇಕಾದ ಅಂಶಗಳೆಂದರೆ ನಮ್ಮಲ್ಲಿ ರಸ್ತೆ, ವಿದ್ಯುತ್‌ಶಕ್ತಿ, ಕುಡಿಯುವ ನೀರಿನ ಪೂರೈಕೆ ಮುಂತಾದ ಸೌಲಭ್ಯ ಹೊಂದಿರುವ ಗ್ರಾಮಗಳ ಸಂಖ್ಯೆ ಗಣನೀಯವಾಗಿಲ್ಲ. ಈಗಲೂ ಶೇಕಡಾ ೪೦ರಷ್ಟು ಜನ ಬಡತನದ ರೇಖೆಯಿಂದ ಕೆಳಗೆ ಬದುಕುತ್ತಿದ್ದಾರೆ. ತಲೆಯ ಮೇಲೊಂದು ಸೂರಿಲ್ಲದವರು, ಹೊಟ್ಟೆಗೆ ಅನ್ನವಿಲ್ಲದವರು, ಕೊಳಚೆ ಪ್ರದೇಶಗಳಲ್ಲಿ ಬದುಕುವವರು ಕೋಟ್ಯಂತರ ಜನ ಇದ್ದಾರೆ. ಇವರಿಗೆಲ್ಲಾ ಕನಿಷ್ಠ ಮಟ್ಟದ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು ಸಮಾಜದ ಜವಾಬ್ದಾರಿ ಮತ್ತು ಅದಕ್ಕಾಗಿ ತಾಂತ್ರಿಕ ಆಧುನೀಕರಣಕ್ಕೆ ಮೊರೆಹೋಗುವುದು ಅನಿವಾರ್ಯ. ಈ ಹಿನ್ನೆಲೆಯಲ್ಲಿ

ಉದ್ಯಮಗಳೆಂದರೆ ಪರಿಸರನಾಶ ಎಂಬ ಸರಳರೇಖಾತ್ಮಕ ಸಂಬಂಧ ಕಲ್ಪಿಸಿಕೊಂಡು ಯಾವುದೇ ವಿಧದ ತಾಂತ್ರಿಕ ಆಧುನೀಕರಣವನ್ನು ಪರಿಸರ ಸಮಸ್ಯೆಯ ಹೆಸರಿನಲ್ಲಿ ವಿರೋಧಿಸುವುದು ಸರಿಯಲ್ಲ. ಈ ಸಂದರ್ಭದಲ್ಲಿ ಉದ್ಯಮೀಕರಣ ಸಾಧ್ಯವಾಗುವ ಸಾಮಾಜಿಕ ಸಂಬಂಧಗಳ ಕಡೆಗೆ ಗಮನ ಹರಿಸುವುದು ಕೂಡ ಅಗತ್ಯ. ಪರಿಸರವನ್ನು ಸಸ್ಯವರ್ಗ, ಪ್ರಾಣಿವರ್ಗ, ನೀರು, ಗಾಳಿ, ಮುಂತಾದುವುಗಳ ಸಂಬಂಧ ಎಂದು ಸಾಮಾನ್ಯವಾಗಿ ಕಲ್ಪಿಸಲಾಗಿದೆ. ಆದರೆ ಪರಿಸರವಾದವು ಬಂಡವಾಳಶಾಹಿ ಉತ್ಪಾದನೆಯ ಸಾಮಾಜಿಕ ಸಂಬಂಧ ಯಾವುದು ಎನ್ನುವುದನ್ನು ಕೂಡ ಗಮನಿಸಬೇಕಾಗಿದೆ. ಖಾಸಗಿ ಲಾಭದ ನೆಲೆಯಲ್ಲಿ ಸಂಘಟಿತಗೊಳ್ಳುವ ಉತ್ಪಾದನೆಯು ಪರಿಸರದ ಮೇಲೆ ಪರಿಣಾಮ ಬೀರಿದಷ್ಟು ಬೇರೆ ಕ್ರಮದ ಉತ್ಪಾದನಾ ಸಂಘಟನೆಗಳು ಪರಿಣಾಮ ಬೀರಲಿಕ್ಕಿಲ್ಲ. ಬಂಡವಾಳಶಾಹಿಯಲ್ಲಿ ಆರ್ಥಿಕ ಸಂಬಂಧಗಳು ಇತರ ಎಲ್ಲಾ ಸಂಬಂಧಗಳ ಮೇಲೂ ಪ್ರಭಾವ ಬೀರುತ್ತವೆ ಹಾಗೂ ಆರ್ಥಿಕ ಸಂಬಂಧಗಳು ಲಾಭ-ನಷ್ಟದ ಹಿನ್ನೆಲೆಯಲ್ಲಿ ನೆಲೆಗೊಳ್ಳುತ್ತವೆ. ಆದುದರಿಂದ ಪರಿಸರನಾಶ ಮತ್ತು ಉದ್ಯಮೀಕರಣಕ್ಕೆ ಸಂಬಂಧ ಕಲ್ಪಿಸುವ ಬದಲು ಬಂಡವಾಳವು ಕಾರ್ಯನಿರ್ವಹಿಸುತ್ತಿರುವ ಒಟ್ಟು ವ್ಯವಸ್ಥೆಯ ಬಗ್ಗೆ ಆಲೋಚನೆ ಮಾಡುವುದು ಅಗತ್ಯ.

ಎರಡನೆಯದಾಗಿ, ಲಿಬರಲ್ ಮಾಡರ್ನಿಟಿಯ ಪ್ರಶ್ನೆ. ಇದು ಸರಕು/ಸೇವೆಗಳ ಪೂರೈಕೆಗೆ ಸಂಬಂಧಿಸಿದ್ದಲ್ಲ; ಬೌದ್ಧಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು. ಇಲ್ಲಿ ಆಧುನಿಕ ಎಂದರೆ ಸಂಪ್ರದಾಯದ ವಿರುದ್ಧ, ಅದರಲ್ಲೂ ಸಂಕುಚಿತ ದೃಷ್ಟಿಕೋನದ, ಮೂಲಭೂತವಾದಿ ಮತ್ತು ಪಾರಂಪರಿಕ ಅಧಿಕಾರಗಳನ್ನು ಪ್ರತಿಬಿಂಬಿಸುವ ಸಂಪ್ರದಾಯಕ್ಕೆ ವಿರೋಧವನ್ನು ಸೂಚಿಸುವ ಆಧುನಿಕತೆ. ಬ್ರಿಟನ್ ಮತ್ತು ಫ್ರಾನ್ಸ್‌ಗಳಲ್ಲಿ ರೂಪುಗೊಂಡ ಕ್ರಾಂತಿಗಳು, ರಷ್ಯಾ ಮತ್ತು ಚೀನಾಗಳಲ್ಲಿ ಸಾಂಪ್ರದಾಯಿಕ ಅಧಿಕಾರಗಳನ್ನು ಬುಡಮೇಲುಗೊಳಿಸಿದ ಚಳವಳಿಗಳು, ಅಮೆರಿಕಾದಲ್ಲಿ ಸರಕಾರ ಮತ್ತು ಚರ್ಚ್‌ಗಳನ್ನು ಬೇರ್ಪಡಿಸಿದ, ಜನಾಂಗೀಯ ಭೇದಗಳನ್ನು ವಿರೋಧಿಸಿದ ಚಳವಳಿಗಳು - ಇವೆಲ್ಲವೂ ಸಂಪ್ರದಾಯವನ್ನು ವಿರೋಧಿಸಿದ ಆಧುನಿಕತೆಗಳೇ ಆಗಿವೆ. ಇವೆಲ್ಲಾ ಸಂಪ್ರದಾಯ ವ್ಯವಸ್ಥೆಯ ಕಟ್ಟುಪಾಡಿನಲ್ಲಿ ನರಳುತ್ತಿದ್ದ ಮಾನವನನ್ನು ಮುಕ್ತಗೊಳಿಸಲು ಮಾಡಿದ ಚಳವಳಿಗಳು. ಒಂದು ವಿಧದಲ್ಲಿ ಇದು ತಾಂತ್ರಿಕ ಆಧುನಿಕತೆಗಿಂತಲೂ ಪ್ರಗತಿಪರ. ಇದು ಪ್ರಕೃತಿಯ ಮೇಲೆ ಮಾನವ ಸಾಧಿಸಿದ ಗೆಲುವಲ್ಲ; ಬದಲಿಗೆ, ಮಾನವ ಮಾನವನ ಮೇಲೆ ಸಾಧಿಸಿದ ಗೆಲುವಾಗಿದೆ. ನಮ್ಮಲ್ಲಿ ಪೆರಿಯಾರ್, ಫುಲೆ, ನಾರಾಯಣ ಗುರುಸ್ವಾಮಿ, ಗಾಂಧೀಜಿ, ಅಂಬೇಡ್ಕರ್ ಮುಂತಾದವರು ಸ್ವಾತಂತ್ರ್ಯಪೂರ್ವದಲ್ಲಿ ಇಂತಹ ಚಳವಳಿಗಳಿಗೆ ಮಹತ್ವ ನೀಡಿದ್ದರು. ಆದರೆ ಸ್ವತಂತ್ರ್ಯಾನಂತರ ತಾಂತ್ರಿಕ ಆಧುನಿಕತೆಯೊಂದೇ ನಮ್ಮ ಎಲ್ಲಾ ಸಮಸ್ಯೆಗಳಿಗೆ ಪರಿಹಾರವೆಂದು ತಿಳಿಯಲಾಯಿತು ಮತ್ತು ದಲಿತವರ್ಗವನ್ನು ಸಂಪ್ರದಾಯದ ಬಿಗಿಹಿಡಿತದಿಂದ ಬಿಡುಗಡೆಗೊಳಿಸುವ ಕೆಲಸ ಕೂಡ ಸರಕಾರದ್ದೇ ಆಯಿತು. ಇದರ ಅರ್ಥ ಸ್ವತಂತ್ರ್ಯಾನಂತರ ನಮ್ಮಲ್ಲಿ ದಲಿತ ಚಳುವಳಿಗಳು ಆಗಲೇ ಇಲ್ಲ ಎಂದು ಅರ್ಥವಲ್ಲ. ಆದರೆ ಅವುಗಳು ಕೂಡ ಸಂವಿಧಾನಾತ್ಮಕ ಪರಿಹಾರ ಬಯಸುವುದು ಅನಿವಾರ್ಯವಾದುದರಿಂದ ಮೂಲಭೂತ ಪರಿವರ್ತನೆ ಸಾಧ್ಯವಾಗಲಿಲ್ಲ. ಇಂತಹ ಸಂದರ್ಭದಲ್ಲಿ ರೂಪುಗೊಂಡ ಪರಿಸರ

ಸಂಬಂಧಿತ ಚಳುವಳಿಗಳು ಸಂಪ್ರದಾಯದ ಬಿಗಿ ಹಿಡಿತದಿಂದ ಕೆಳವರ್ಗದ ಜನರನ್ನು ಮುಕ್ತವಾಗಿಸುವ ಪ್ರಶ್ನೆಗಳನ್ನು ಬದಿಗಿಟ್ಟು ತಾಂತ್ರಿಕ ಆಧುನೀಕರಣದ ಲಾಭಗಳನ್ನು ಸಂಪ್ರದಾಯದ ಚೌಕಟ್ಟಿನಲ್ಲಿಯೆ ಅನುಭವಿಸಲು ಯೋಗ್ಯವಾದ ವಾತವರಣ ನಿರ್ಮಾಣದಲ್ಲಿ ತೊಡಗಿಸಿಕೊಂಡಿವೆ. ಇವುಗಳು ರಾಜಕೀಯೇತರ, ವರ್ಗ ಆಸಕ್ತಿಯಿಲ್ಲದ, ಐಡಿಯಾಲಜಿಯಿಂದ ಮುಕ್ತ ಇವೇ ಮುಂತಾದ ವಿಶೇಷಣೆಗಳಿಂದ ಗುರುತಿಸಲ್ಪಡುತ್ತಿವೆ. ಈ ಘೋಷಣೆಗಳು ತಕ್ಕ ಮಟ್ಟಿಗೆ ಜನರ ಗಮನ ಸೆಳೆದಿವೆ. ಆದರೆ ಈ ತಂತ್ರಗಾರಿಕೆ ನಮ್ಮಲ್ಲಿನ ಅಸಮಾನತೆಗಳನ್ನು ಶಾಶ್ವತವಾಗಿ ಮಸುಕಾಗಿಸುವುದು ಕಷ್ಟ. ಈ ದೃಷ್ಟಿಯಿಂದ ಬರುವ ದಿನಗಳಲ್ಲಿ ಇಂತಹ ಚಳುವಳಿಗಳು ಸಮಾಜದ ಕೆಳವರ್ಗದವರಿಗೆ ಅರ್ಥಪೂರ್ಣವಾಗುವುದು ಕಷ್ಟಕರ.

ಪರಿಸರ ಚಳವಳಿಗಳು ಅಪ್ರಸ್ತುತ ಎಂದು ಸಾಧಿಸುವ ಉದ್ದೇಶದಿಂದ ಮೇಲಿನ ವಾದಗಳನ್ನು ಮುಂದಿಟ್ಟಿಲ್ಲ. ಬದಲಿಗೆ ಭಾರತದ ಇಂದಿನ ಸಂದರ್ಭದಲ್ಲಿ ಪರಿಸರ ಚಳವಳಿಗಳು ಒಂದು ಅಗತ್ಯವೆಂದೇ ನನ್ನ ಖಚಿತ ಅಭಿಪ್ರಾಯ. ಏಕೆಂದರೆ ನಮ್ಮಲ್ಲಿ ಆಧುನಿಕತೆ ಕೆಲವೊಂದು ವಿಕೃತ ರೂಪಗಳಲ್ಲಿ ಪ್ರಕಟಗೊಳ್ಳುವುದನ್ನು ಬಿಟ್ಟರೆ ಆಧುನಿಕ ಸಮಾಜದ ಅಗತ್ಯಗಳಾದ ನಾಗರಿಕ ಸಮಿತಿಗಳಾಗಲೀ, ಪ್ರಜಾತಂತ್ರವಾಗಲೀ, ಅಧಿಕಾರಶಾಹಿಯಾಗಲೀ ಪರಿಪೂರ್ಣವಾಗಿ ಎಲ್ಲಾ ಸ್ತರಗಳಲ್ಲಿ ಇನ್ನೂ ಕೂಡ ಸರಿಯಾಗಿ ಬೇರೂರಿಲ್ಲ. ಇದರ ಪರಿಣಾಮವಾಗಿ ಖಾಸಗೀ ಹಾಗೂ ಸಾರ್ವಜನಿಕ ಬಂಡವಾಳವು ಪರಿಸರ ಸಂಬಂಧಿತ ನಿಯಮಗಳನ್ನು ಗಾಳಿಗೆ ತೂರಿ ಉದ್ಯಮಗಳನ್ನು ಸ್ಥಾಪಿಸುತ್ತಿರುವುದು ಸರ್ವೇಸಾಮಾನ್ಯವಾಗಿದೆ. ಈ ಹಿನ್ನೆಲೆಯಲ್ಲಿ ಅಧಿಕಾರಶಾಹಿಯನ್ನು ಪರಿಸರ ಸಂಬಂಧಿತ ನಿಯಮಗಳಲ್ಲಿ ಜಾರಿಗೆ ತರುವಂತೆ ಮತ್ತು ಉದ್ಯಮಗಳು ಅದನ್ನು ಚಚು ತಪ್ಪದೆ ಅನುಸರಿಸುವಂತೆ ಒತ್ತಡ ಹೇರುವಲ್ಲಿ ಪರಿಸರ ಚಳವಳಿಯ ಪಾತ್ರವಿದೆ. ಆದರೆ ಪರಿಸರ ಚಳವಳಿಗಳು ಇದಕ್ಕಿಂತಲೂ ಮುಂದೆ ಹೋಗಿ ಉದ್ಯಮೀಕರಣವನ್ನೇ ಸಾರಾಸಗಟಾಗಿ ವಿರೋಧಿಸುವುದು ಸರಿಯಲ್ಲ. ಇಡೀ ಸಮಾಜದ ಮೇಲೆ ಪ್ರಭಾವ ಬೀರಬಹುದಾದ ನಿರ್ಧಾರಗಳು ಈ ಬಗೆಯ ಸಮಾಜದ ಬಹುತೇಕ ವರ್ಗಗಳ ಭಾಗವಹಿಸುವಿಕೆಯಿಂದ ಅರ್ಥಪೂರ್ಣವಾಗುತ್ತವೆ. ಆದರೆ ಸದ್ಯಕ್ಕೆ ಈ ಚಳವಳಿಗಳು ಆ ರೂಪದಲ್ಲಿ ಇಲ್ಲವೆಂದೇ ನನ್ನ ಒಟ್ಟು ಚರ್ಚೆಯ ಅಭಿಪ್ರಾಯ.

## ಪರಾಮರ್ಶನ ಬರೆಹಗಳು

(ಈ ಪುಸ್ತಿಕೆಯ ಕರಡು ಪ್ರತಿಯನ್ನು ಓದಿ ಸೂಕ್ತ ಸಲಹೆಗಳನ್ನು ನೀಡಿದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಡಾ. ಶಿವರಾಮ ಪಡಿಕಲ್ ಮತ್ತು ಡಾ. ಟಿ. ಪಿ. ವಿಜಯ ಇವರುಗಳಿಗೆ ಕೃತಜ್ಞತೆಗಳು)

೧. ಬನ್ನಾಡಿ ವಸಂತ, *ಸಂಸ್ಕೃತಿ ಚಿಂತನೆ*, ಅನುವಾದಿತ ಲೇಖನಗಳು, ಮಂಗಳಗಂಗೋತ್ರಿ: ಅರಿವುಬರಹ ಪ್ರಕಾಶನ, ೧೯೯೬.

೨. ರಾಜಶೇಖರ್. ಜಿ, *ಸಮಾಜವಾದ ಮತ್ತು ಪರಿಸರ* (ವಿಲಿಯಂ ರೇಮಂಡ್ಸ್ ರವರ ಸೋಸಲಿಸಂ ಅಂಡ್ ಎನ್ ವಾಯರನ್ ಮೆಂಟ್‌ನ ಅನುವಾದ), ಉಡುಪಿ: ಸ್ನೇಹಿತರ ಬಳಗ ಪ್ರಕಾಶನ, ೧೯೮೬.

೩. ವೈಯಿನರ್ ಮೈರನ್, *ಪಾರ್ಟಿ ಬಿಲ್ಡಿಂಗ್ ಇನ್ ಎ ನ್ಯೂ ನೇಶನ್*, ದಿ ಇಂಡಿಯನ್ ನೇಶನಲ್ ಕಾಂಗ್ರೇಸ್, ಚಿಕಾಗೊ: ಚಿಕಾಗೊ ಯುನಿವರ್ಸಿಟಿ ಪ್ರೆಸ್, ೧೯೬೭.

೪. ಹಾಬ್ಸ್ ವಾಮ್. ಇ. ಜೆ., *ದಿ ಏಜ್ ಆಫ್ ಕ್ಯಾಪಿಟಲ್*, ಮುಂಬಯಿ: ರೂಪ ಎಂಡ್ ಕಂಪೆನಿ, ೧೯೯೨.

೫. ಹಿಲ್ಟನ್ ರೋಡ್ನಿ (ಎಡಿಟೆಡ್), *ದಿ ಟ್ರಾನ್ಸಿಶನ್ ಫ್ರಮ್ ಫ್ಯೂಡಲಿಸಮ್ ಟು ಕ್ಯಾಪಿಟಲಿಸಮ್*, ಲಂಡನ್ : ಅನ್ ವಿನ್ ಬ್ರದರ್ಸ್, ೧೯೭೮.

೬. ಸ್ವೀಝಿ ಪೌಲ್, *ದಿ ಥಿಯರಿ ಆಫ್ ಕ್ಯಾಪಿಟಲಿಸ್ಟ್ ಡೆವಲಪ್‌ಮೆಂಟ್*, ಕಲ್ಕತ್ತ: ಕೆ. ಪಿ. ಬಾಗ್ ಚಿ ಎಂಡ್ ಕಂಪೆನಿ, ೧೯೯೧.

೭. ಫ್ರಾಂಕ್. ಎ. ಜಿ., *ವರ್ಲ್ಡ್ ಎಕ್ಯೂಮಿಲೇಶನ್* - ೧೪೯೨-೧೭೮೯, ಲಂಡನ್ : ದಿ ಮೆಕ್ ಮಿಲನ್ ಪ್ರೆಸ್ , ೧೯೭೮.

೮. ಬರ್ಧನ್ ಪ್ರಣಾಬ್ , *ದಿ ಪೊಲಿಟಿಕಲ್ ಎಕಾನಮಿ ಆಫ್ ಡೆವಲಪ್‌ಮೆಂಟ್ ಇನ್ ಇಂಡಿಯ*, ಡೆಲ್ಲಿ: ಆಕ್ಸ್ ಫರ್ಡ್ ಯುನಿವರ್ಸಿಟಿ ಪ್ರೆಸ್ , ೧೯೮೪.

೯. ಮಾಧವ ಗಾಡ್ಗಿಲ್ ಮತ್ತು ರಾಮಚಂದ್ರ ಗುಹ, *ಇಕಲಾಜಿ ಆಂಡ್ ಇಕ್ವಿಟಿ: ದಿ ಯೂಸ್ ಆಂಡ್ ಎಬ್ಯೂಸ್ ಆಫ್ ನೇಚರ್ ಇನ್ ಕಾಂಟೆಂಪರರಿ ಇಂಡಿಯಾ*, ನ್ಯೂಡೆಲ್ಲಿ: ಪೆಂಗ್ವಿನ್ ಬುಕ್ಸ್ ಲಿಮಿಟೆಡ್, ೧೯೯೫.

೧೦. ಶಶಿಧರ. ಆರ್ ., `ಸಂಪ್ರದಾಯ ಮತ್ತು ಆಧುನಿಕತೆ,' *ಬಹುರೂಪಿ ಸುದ್ದಿ*, ಸಂ.೧, ಅಕ್ಟೋಬರ್ ೧೯೯೭.:

೧೧. ಡೋಂಗ್ರೆ ಯಶವಂತ, `ಅಂತಾರಾಷ್ಟ್ರೀಯ ಹಣಕಾಸು ವ್ಯವಸ್ಥೆ ಮತ್ತು ಬಡದೇಶಗಳು,' *ಅರಿವುಬರಹ*, ನಂ. ೧, ೧೯೯೧.

೧೨. ಆಲಾವಿ ಹಮ್ಜ, `ಇಂಡಿಯ ಎಂಡ್ ಕಾಲೋನಿಯಲ್ ಮೋಡ್ ಆಫ್ ಪ್ರೊಡಕ್ಷನ್,' *ಎಕಾನಮಿಕ್ ಎಂಡ್ ಪೊಲಿಟಿಕಲ್ ವೀಕ್ಲಿ*, ಸಂಚಿಕೆ. ೧೦, ಸಂ. ೩೩, ೩೪ ಮತ್ತು ೩೫, ೧೯೭೫, ಪು. ೧೨೩೫-೬೨.

# ಮಂಟಪಮಾಲೆ

## ೩೫

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ